# ಕೊಡಗು  ಸಂಗಾತಿ

ರ್ 16 ರಿಂದ 30, 2000 ಪಾಕ್ಷಿಕ ಪತ್ರಿಕೆ (ಜಾರ್ದೆ 1-15)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 4 ಸಂಚಿಕೆ : 22 ಪುಟಗಳು : 24 ಬೆಲೆ ರೂ. : 6-00




**ನಾನು ಕಿರಿಯವ, ಆದರೆ ಯಾವ ಸ್ವಾಮೀಜಿಯವರಿಗಿಂತ ಕಡಿಮೆ? ಮಾಸ್ಟರ್ ಕಾರ್ತಿಕ್**

ಚಿತ್ರ : ದುಗ್ಗಳ ಸದಾನಂದ ಗೌಡ, ನಾಪೋಕ್ಲು

## ಕೊಡಗು ಸಂಗಾತಿ ಚಂದದಾರರಿಗೊಂದು ಸುವಾರ್ತೆ

ಕೊಡಗು ಸಂಗಾತಿ ಪತ್ರಿಕಾ ಅಭಿವೃದ್ಧಿ ಬಯಸಿ ಲಾಟರಿ ಯೋಜನೆಯನ್ನು ನಾವು ಹಮ್ಮಿಕೊಂಡಿದ್ದೇವೆ. ದಿನಾಂ 31-12-2000ದ ಒಳಗಡೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಚಂದವನ್ನು ನವೀಕರಿಸಿಕೊಳ್ಳಬೇಕು. ನವೀಕರಿಸಿದ ಹೆಸರಿನಲ್ಲಿ ಮಾತ್ರ ಲಾಟರಿಯನ್ನು ಎತ್ತಲಾಗುವುದು.

1ನೇ ಬಹುಮಾನ : ¼ ಪವನ್ ಚಿನ್ನ
2ನೇ ಬಹುಮಾನ : 1½ ಲೀ ಕುಕ್ಕರ್1
3ನೇ ಬಹುಮಾನ : ಸ್ಟೀಲ್ ಫ್ಲಾಸ್ಕ್ 1
4ನೇ ಬಹುಮಾನ : ಮಿಲ್ಕ್ ಕುಕ್ಕರ್ 1
5ನೇ ಬಹುಮಾನ : ದೋಸೆ ತವ 1
6ನೇ ಬಹುಮಾನ : ಗೋಡೆ ಗಡಿಯಾರ 1
7ನೇ ಬಹುಮಾನ : ಉತ್ತಮ ಪೆನ್ನು 1
8ನೇ ಬಹುಮಾನ : ರೋನಾಲ್ಡ್ ಪೆನ್ನುಗಳು 1 ಡಜನ್
9ನೇ ಬಹುಮಾನ : ರೋನಾಲ್ಡ್ ಪೆನ್ನುಗಳು ½ ಡಜನ್
10ನೇ ಬಹುಮಾನ : ಒಂದು ಸಂಗಾತಿ ಮೊಮೆಂಟೊ.

**ವಿ. ಸೂ. :** ಆಕರ್ಷಕ ಬಹುಮಾನ ಲಾಟರಿಯನ್ನು ಮೈಸೂರಿನಲ್ಲಿರುವ ಸಂಗಾತಿಯ ಮುಖ್ಯ ಕಛೇರಿಯಲ್ಲಿ ಗಣ್ಯ ವ್ಯಕ್ತಿಗಳ ಸಮ್ಮುಖದಲ್ಲಿ ದಿನಾಂಕ 7-1-2001 ರವಿವಾರ ಎತ್ತಲಾಗುವುದು.

**ವ್ಯವಸ್ಥಾಪಕರು, ಕೊಡಗು ಸಂಗಾತಿ**

## ಸಂಗಾತಿಯ ಸಂಗತಿ

ಕೊಡಗು ಸಂಗಾತಿ ಪತ್ರಿಕೆಯು ದಿನಾಂಕ 9-4-1997ರ ಉಗಾದಿಯ ಪುಣ್ಯ ದಿನದಂದ್ ಜನರ ಆಶೋತ್ತರಗಳಿಗಾಗಿ ಉದಯವಾಯಿತು. ಈಗ ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದೆ. ಜನಾಂಗದ ಏಳಿಗೆ, ಐಕ್ಯತೆ, ಸಂಘಟನೆಗಾಗಿ ಶ್ರಮಿಸುತ್ತಿದೆ. ಹಲವಾರು ಬರಹಗಾರರಿಗೆ ಧೀಮಂತ ವೇದಿಕೆಯಾಗಿದೆ. ಗತಕಾಲದ ನೆನಪನ್ನು ಆಲೋಚಿಸುವಂತೆ ಮಾಡಿದೆ. ಕಾಲ ಕಂಡವರ ಪರಿಚಯವನ್ನು ಸಾಕಷ್ಟು ಮಾಡಿಸಿದೆ. ತನ್ನತನವನ್ನು ಹೊರ ಜಗತ್ತಿಗೆ ಪರಿಚಯಿಸಿದೆ. ಹಲವರಿಂದ ಸೈ ಅನ್ನಿಸಿ ಮುಂದುವರಿಯುತ್ತಿದೆ.

ಆದರೆ ಮೊದ ಮೊದಲು ಪ್ರಚಾರಕ್ಕಾಗಿ ಪತ್ರಿಕೆಗಳನ್ನು ಕಳುಹಿಸಿದ್ದೇವು. ನಂತರ ಜನರ ಕೋರಿಕೆ ಮೇರೆ ಮಾತ್ರ ಪತ್ರಿಕೆಯನ್ನು ಕಳುಹಿಸುತ್ತಾ ಇರುವೆವು. ಪತ್ರಿಕೆಯನ್ನು ಅರ್ಧಕ್ಕಿಂತ ಹೆಚ್ಚಿನ ಚಂದದಾರರು ನಿರಂತರವಾಗಿ ಮುಂದುವರಿಸಿದ್ದಾರೆ. ಉಳಿದವರಿಂದ ಒಂದು ವರ್ಷ, ಎರಡು ವರ್ಷಕ್ಕಿಂತಲೂ ಹೆಚ್ಚುಬಾಕಿ ಇದೆ. ಹಲವಾರು ಸರ್ತಿ ಜ್ಞಾಪನ ಪತ್ರ ಕಳುಹಿಸಿದ್ದೇವು. ಈಗ ಪತ್ರಿಕೆಯ ವಿಳಾಸದ ಮೇಲ್ಗಡೆ ವಾಯಿದೆ ದಿನಾಂಕವನ್ನು ಸಹ ನಮೂದಿಸುತ್ತಿರುವೆವು. ಆದರೂ ಸಹ ಹಣ ಸಂದಾಯವಾಗುತ್ತಿಲ್ಲ. ಸಂಗಾತಿ ನಾಡಿನ ನಾನಾ ಭಾಗಗಳಿಗೆ ಸ್ವತಃ ಖುದ್ದು ಹೋಗಿ ಬರಲು ಆಗುತ್ತಿಲ್ಲ. ಚಂದದಾರರ ಮತ್ತು ಅಭಿಮಾನಿಗಳನ್ನು ನಾವು ಸಹ ಅರ್ಥೈಸುತ್ತೇವೆ. ಆದರೆ ವಿಧಿ ಇಲ್ಲ. ಈಗೀನ ಪೇಪರ್ ಧಾರಣೆ ಪ್ರತಿ ತಿಂಗಳು ಹೆಚ್ಚುತ್ತಿರುತ್ತದೆ. ಪೆಟ್ರೋಲ್ ಬೆಲೆ ಸಹ ಏರಿಕೆಯಾಗಿರುವುದು ತಮಗಿಗಾಗಲೇ ತಿಳಿದಿದೆ. ಇದನ್ನೆಲ್ಲಾ ನಿಭಾಯಿಸುವುದು ಸಾಮಾನ್ಯವೇನಲ್ಲ. ನೆನಪಿರಲಿ ಪತ್ರಿಕೆ ವ್ಯಾಪಾರದ ಮನೋಭಾವನೆಯನ್ನು ಹೊಂದಿಲ್ಲ. ಸಂಗಾತಿ ಜನಾಂಗದ ಅಭಿವೃದ್ಧಿಯನ್ನು ಬಯಸಿ ಹೊರ ಹೊಮ್ಮಿದೆ. ಸಂಗಾತಿಗೆ ತ್ರಾಸವಾಗಬಾರದು. ಸಂಗಾತಿ ಮಗು ನಿಮ್ಮ ಕೈಯಲ್ಲಿದೆ. ಅದನ್ನು ಪೋಷಿಸಿ ಬೆಳೆಸುವುದು ನಿಮ್ಮ ಧರ್ಮ ಮತ್ತು ಕರ್ತವ್ಯವಾಗಿದೆ.

ದಯ ಮಾಡಿ ಈ ನಮ್ಮ ಕೋರಿಕೆಯನ್ನು ಮನ್ನಿಸಿ ಪತ್ರಿಕಾ ಚಂದದಾರರು ಕೂಡಲೇ ಹಣ ಕಳುಹಿಸಿಕೊಡುವಂತೆ ನಮ್ಮ ವಿನಮ್ರ ವಿನಂತಿಯಾಗಿದೆ. ಹಣವನ್ನು M.O./D.D./Cashಮೂಲಕ ನೀಡಬಹುದು. ಹಾಗೆಯೇ ಸ್ಥಳೀಯ ಚೆಕ್‌ಗಳನ್ನು ಸ್ವೀಕರಿಸುತ್ತೇವೆ.

**- ಸಂಪಾದಕಿ**

## ಒಂದನೇ ವರ್ಷದ ಹುಟ್ಟು ಹಬ್ಬದ ಆಚರಣೆ : ದಿನಾಂಕ 29-10-2000



ಕಿನ್ನರಿ (ಪೂವ್ವಿ)

ಜೈನೀರ ಶ್ರೀ ಮತ್ತು ಶ್ರೀಮತಿ ಜಾಲಿಯವರ ಸುಪುತ್ರಿ ಚಿ. ಕಿನ್ನರಿ (ಪೂವ್ವಿ)ಯಂ ಮೊದಲ ಹುಟ್ಟುಹಬ್ಬವನ್ನು ಗೌಡ ಸಂಪ್ರದಾಯದಂತೆ ಕಿನ್ನರಿಯ ಚಾಮೆವ್ವಂದಿರಾದ ಜೈನೀರ ಶ್ರೀಮತಿ ಜಾನಕಿ ಮೊಣ್ಣಪ್ಪ ಮತ್ತು ಶ್ರೀಮತಿ ಬೊಪ್ಪಳಿಕೆ ಗೋಪಮ್ಮನವರು ಜ್ಯೋತಿ ಬೆಳಗುವುದರೊಂದಿಗೆ ಆಚರಿಸಿದರು.

ಕುಟುಂಬಸ್ತರು, ಬಂಧುಗಳು ಮತ್ತು ಮಿತ್ರರು ಅಪಾರ ಸಂಖ್ಯೆಯಲ್ಲಿ ಭಾಗವಹಿಸಿ ಸಂತೋಷ ಕೂಟವನ್ನು ಹಂಚಿಕೊಂಡು, ಇಂತಹ ನೂರು ಹುಟ್ಟುಹಬ್ಬವನ್ನು ಆಚರಿಸಲೆಂದು ಕಿನ್ನರಿಯನ್ನು ಹರಸಿ ಹಾರೈಸಿದರು.

ಹಾರ್ದಿಕ ಶುಭಾಶಯಗಳೊಂದಿಗೆ

**ಗೌಡ ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು**



# 2000, ನವೆಂಬರ್ 1 ರಿಂದ 15ರ ತನಕ

## ಒಳನೋಟ 




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
| ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
| ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |



**ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 6 ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ : ಗೌಡ ಸಮ್ಮೇಳನ

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಮೂಲಕ ದಕ್ಷಿಣ ಕನ್ನಡ ಮತ್ತು ಕೊಡಗು ಗೌಡರ ಸಮ್ಮೇಳನ ಏರ್ಪಡಿಸುತ್ತಿರುವುದು ಸಂತೋಷದ ವಿಷಯ. 1985ರಲ್ಲಿ ಪ್ರಾರಂಭ ಮಾಡಿದ ಈ ಸಮ್ಮೇಳನದ ಕಾರ್ಯಕ್ರಮಗಳು ಇಂದಿನವರೆಗೆ ಎರಡು ಸಲ ಮಾತ್ರ ಕೂಡಿತ್ತು. ಸಮ್ಮೇಳನ ಉದ್ದಿಶ್ಯವೇನೋ ಉಚ್ಚಮಟ್ಟದ್ದಾಗಿದ್ದರೂ ಸಮ್ಮೇಳನದಲ್ಲಿ ಕೈಗೊಂಡ ನಿರ್ಣಯಗಳನ್ನು ಕಾರ್ಯಗತ ಮಾಡುವುದಕ್ಕೆ ಸಮ್ಮೇಳನ ಕಳೆದ ನಂತರ ಯಾವ ಏರ್ಪಾಡುಗಳೂ ಮಾಡಿಕೊಂಡಿಲ್ಲವೆಂದೇ ಹೇಳಬಹುದು.

ಈ ಹಿಂದಿನ ಎರಡು ಸಮ್ಮೇಳನದಲ್ಲಿ ಜನರು ವ್ಯವಸ್ಥಾಪಕರು ನಿರೀಕ್ಷಿಸಿದುದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ನೆರೆದಿದ್ದರು. ಸಮ್ಮೇಳನದಲ್ಲಿ ಹಲವಾರು ನಿರ್ಣಯಗಳನ್ನು ಕೈಗೊಳ್ಳಲಾಯಿತು. 1985ರ ನಂತರ ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘ ರಿಜಿಸ್ಟರ್ ಮಾಡಲ್ಪಟ್ಟು ಸಂಘಕ್ಕೊಂದು ನಿವೇಶನವನ್ನು ಸುಳ್ಯದಲ್ಲಿ ವಿಕ್ರಯಿಸಲಾಯಿತು. ಇವೆರಡು ಕೆಲಸಗಳಲ್ಲದೆ ಗೌಡರ ಮಕ್ಕಳ ವಿದ್ಯಾಭ್ಯಾಸ ವಿದ್ಯಾಭಿವೃದ್ಧಿ, ನಿರುದ್ಯೋಗ, ವಿದ್ಯಾವಂತ ಯುವಕ ಯುವತಿಯರ ತೊಂದರೆ ನಿವಾರಣೆ, ನಶಿಸಿಹೋಗುತ್ತಿರುವ ಗೌಡರ ಸಂಸ್ಕೃತಿಯ ಪುನರ್ಚ್ಚೇತನ ಕಾರ್ಯಗಳು, ಗೌಡರಲ್ಲಿ ದಿನೇ ದಿನೇ ಹೆಚ್ಚುತ್ತಿರುವ ವರದಕ್ಷಿಣೆ ಪಿಡುಗಿನ ನಿವಾರಣೆಯ ವಿಷಯದಲ್ಲಿ ಯಾವ ರೀತಿಯ ಈ ಹದಿನೈದು ವರ್ಷಗಳಲ್ಲಿ ಕೈಕೊಂಡಿದ್ದು ಕಂಡು ಬಂದಿಲ್ಲ. ಇವುಗಳ ನಿರ್ವಹಣೆಗಳಿಗೆ ಸಮ್ಮೇಳನದಲ್ಲಿ ವಿವಿಧ ವಿಷಯಗಳಲ್ಲಿ ನುರಿತ ವ್ಯಕ್ತಿಗಳ ಮಾರ್ಗದರ್ಶನದಲ್ಲಿ ಚರ್ಚಾಗೋಷ್ಠಿ ಎಂದು ಸಮ್ಮೇಳನದ ಅಂಗವಾಗಿ ನಿರ್ಣಯಗಳನ್ನು ತೆಗೆದು ಕೊಂಡು ಅವುಗಳನ್ನು ಅನುಷ್ಠಾನಕ್ಕೆ ತಕ್ಕ ಏರ್ಪಾಡು ಆದರೇನೇ ಸಮ್ಮೇಳನ ಕರೆದು ಜನರನ್ನು ಕೂಡಿ ಹಾಕಿದುದು ಸಾರ್ಥಕವಾದೀತು. ಅದಲ್ಲದೆ ಬರೇ ಭಾಷಣ ಹೊಗಳಿಕೆ ವ್ಯಕ್ತಿಗಳಿಗೆ ಸನ್ಮಾನ ಗೌರವಾನ್ವಿತ ವ್ಯಕ್ತಿಗಳನ್ನು ಬರಮಾಡಿ ಅವರಿಂದ ಭಾಷಣ ಬಿಗಿಸಿದರೆ ಸಮ್ಮೇಳನದ ಗುರಿ ಸಾಧಿಸಿದಂತಾಗದು. ಬೃಹತ್ ಜನ ಸಂದಣಿ ಸಮ್ಮೇಳನ ಯಶಸ್ವಿಯಾಯಿತೆಂದು ಹೇಳಿಕೊಂಡರೆ ಪ್ರಯೋಜನವಿಲ್ಲ. ಜನಾಂಗದ ವಿವಿಧ ರೀತಿಯ ಸಮಸ್ಯೆಗಳನ್ನು ನಿವಾರಿಸುವ ದಾರಿಯನ್ನು ಕಂಡು ಹಿಡಿಯುವ ದಾರಿಯನ್ನು ಸಮ್ಮೇಳನದಲ್ಲಿ ಕಂಡು ಕೊಳ್ಳಬೇಕು.. ಹಲವಾರು ಶತಮಾನಗಳಿಂದ ಅನುಸರಿಸುತ್ತಿರುವ ಗೌಡರ ಸಂಸ್ಕೃತಿ ಕವಲು ದಾರಿ ಹಿಡಿದು ನಾಶವಾಗುತ್ತಿರುವುದನ್ನು ಸಮ್ಮೇಳನ ದಲ್ಲಿ ಚರ್ಚಿಸಿ ತಕ್ಕ ಕಾರ್ಯಕ್ರಮಗಳನ್ನು ರೂಪಿಸಿ ಅವುಗಳ ಅನುಷ್ಠಾನಕ್ಕೆ ತಕ್ಕ ಏರ್ಪಾಡು ಆಗಬೇಕಿದೆ. ಇವುಗಳ ನೆರವೇರಿಕೆಗೆ ಸರಿಯಾದ ವ್ಯಕ್ತಿಗಳನ್ನು ನೇಮಿಸಿ ಕಾರ್ಯಗತ ಮಾಡಿದರೆ ಮಾತ್ರ ಸಮ್ಮೇಳನ ಫಲಪ್ರದವಾದೀತು. ಕರ್ನಾಟಕದಲ್ಲಿರುವ ಒಕ್ಕಲಿಗರೆನಿಸಿಕೊಂಡವರಲ್ಲಿ ಅನೇಕ ಪಂಗಡಗಳಿದ್ದು ಒಟ್ಟಾರೆಯಾಗಿ ಒಕ್ಕಲಿಗರೆಂದು ಕರೆದುಕೊಂಡರೂ ಅವರ ಒಳಪಂಗಡಗಳ ಹೆಸರನ್ನು ಹೇಳುವುದರಲ್ಲೂ ಒಳಪಂಗಡಗಳ ಸಂಘಟನೆಯನ್ನು ಮುಂದುವರಿಸುತ್ತಿದ್ದಾರೆ. ಉದಾಹರಣೆಗೆ ಕುಂಚಿಟಿಗ ಒಕ್ಕಲಿಗರು ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಹೊಂದಿದ್ದಾರೆ. ಅದೇರೀತಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟರು ಒಕ್ಕಲಿಗ ಸಂಘದ ಸದಸ್ಯರಾಗಿದ್ದರೂ ಅವರದ್ದೇ ಬಂಟ್ರ ಯಾನೆ ನಾಡವರ ಸಮಾಜವನ್ನು ಮುಂದುವರಿಸಿಕೊಂಡು ಬರುತ್ತಾ ಅವರ ಪಾರಂಪರ್ಯದ ಸಂಸ್ಕೃತಿಯನ್ನು ಬಹಳ ಶ್ರದ್ಧೆಯಿಂದ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಅದೇ ರೀತಿ ದಕ್ಷಿಣ ಕನ್ನಡ ಹಾಗೂ ಕೊಡಗಿನ ಗೌಡರನ್ನು ಸರ್ಕಾರದವರು ಒಕ್ಕಲಿಗರ ಸಮೂಹದಲ್ಲಿ ಸೇರಿಸಿದ್ದರು. ಇವರಿಗೆ ಹತ್ತು ಕುಟುಂಬ ಹದಿನೆಂಟು ಗೋತ್ರದ ಸಂಸ್ಕೃತಿ ವ್ಯವಸ್ಥಿತ ರೀತಿಯಲ್ಲಿ ಮುಂದುವರಿಸಿಕೊಂಡು ಬರುವುದಕ್ಕೆ ಇಂತಹ ಸಮ್ಮೇಳನಗಳು ಸಹಾಯಕವಾಗಬಹುದೆಂದು ಸಂಗಾತಿಯ ಅನಿಸಿಕೆ.

— ಸಂಗಾತಿ.

---

## ಧೈರ್ಯವಿರಲಿ ಮನದಲಿ

ಸ್ವಂತಿಕೆಯಿರಲಿ ಮನದೊಳಗೆ
ಬೆದರದಿರು ಅನ್ಯರ ದಬ್ಬಾಳಿಕೆಗೆ
ಧೈರ್ಯವಿರಲಿ ಹೃದಯದಲಿ
ಆಲೋಚಿಸಿ ಸತ್ಪಥದಲಿ ನಡೆಯೊ ||೧||

ಭ್ರಷ್ಟಾಚಾರಿ ಅಧಿಕಾರಿಗಳ
ನುಡಿಯನು ಎಂದೂ ನಂಬದಿರು
ಮತ್ಸರ ಪಡುವ ನೆರೆ ಜನರ
ಮೋಸದ ನುಡಿಯ ಮರೆತುಬಿಡು ||೨||

ಕಲಿಯುಗವಿದು ನೋಡಣ್ಣಾ
ಸತ್ಯ ಧರ್ಮಕೆ ಬೆಲೆಯೆಲ್ಲಿ ?
ರಕ್ಷಿಸುವವರು ಯಾರೂ ಇಲ್ಲ
ಸಂಘ ಶಕ್ತಿಯೇ ಗತಿಯಣ್ಣಾ ||೩||

ಗುಲಾಮರಾಗಿಹರು ದೇಶಿಗರು
ವಿದೇಶಿಯರ ಕೈಗೊಂಬೆಗಳು
ದೇಶ ಪ್ರೇಮಿಗೆ ಸತ್ಯತೆಗೆ
ಸಿಗುವುದೆಲ್ಲಿ ಮಾನ್ಯತೆಯು ||೪||

(ಸ್ವಾತಂತ್ರ ದೊರೆತರೂ, ಭಾರತದಲ್ಲಿ ಮುಖಂಡರು, ಅಧಿಕಾರಿಗಳು ಬಡ ಜನರನ್ನು ರಕ್ಷಿಸದೆ, ಅನ್ಯಾಯ ವೆಸಗುತ್ತಿರುವುದನ್ನು ಕಂಡು ನೊಂದು ಬರೆದ ಕವನ 1-11-1999 ರಂದು)

ವಾಣಿಕುಮಾರ್
ಮಂಡೆಕೋಲು, ಸುಳ್ಯ. ದ. ಕ.

---

ಅದೃಷ್ಟ ಬರುವಾಗ ಮುಟ್ಟಿದ್ದೆಲ್ಲಾ ಚಿನ್ನ

# ಮಹಿಳಾ ಪತ್ರಕರ್ತರು ಮನಸ್ಸು ಬಿಚ್ಚಿಟ್ಟಾಗ.....

ತಾಯ್ತನದ ಜವಾಬ್ದಾರಿಕೆಯನ್ನು ನಿರ್ವಹಿಸುವ ಸಮಯದಲ್ಲಿ ಮಹಿಳಾ ಪತ್ರಕರ್ತೆಯರು ಮನೆಯಿಂದ ಕೆಲಸ ನಿರ್ವಹಿಸುವಂತಹ ಸಾಧ್ಯತೆಗಳ ಬಗ್ಗೆ ಆಲೋಚಿಸಬೇಕಾದ ಅವಶ್ಯಕತೆಯಿದೆ ಎಂದು ಪತ್ರಿಕೋದ್ಯಮದಲ್ಲಿ ಮಹಿಳಯರು ಕಾರ್ಯಗಾರದಲ್ಲಿ ಭಾಗವಹಿಸಿದ್ದ ಅನೇಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪತ್ರಿಕೋದ್ಯಮದಲ್ಲಿ ಮಹಿಳಾ ಪತ್ರಿಕೋದ್ಯಮಿಗಳು ಹಾಗೂ ಸುದ್ದಿ ಎನ್ನುವ ಅಮ್ಮು ಜೋಸೆಫ್ ಅವರ ಕೃತಿಯಲ್ಲಿ ಉಲ್ಲೇಖಿತವಾಗಿರುವ ಕೆಲವು ವಿಷಯಗಳು ಹಾಗೂ ಮಹಿಳಾ ಪತ್ರಿಕೋದ್ಯಮಿಗಳು ಎದುರಿಸುತ್ತಿರುವ ಸಮಸ್ಯೆ ಹಾಗೂ ಪರಿಹಾರಗಳ ಕುರಿತು ವಾಯ್ಸ್ ಸಂಸ್ಥೆ ಏರ್ಪಡಿಸಿರುವ ಎರಡು ದಿನದ ಕಾರ್ಯಗಾರದಲ್ಲಿ ಹೈದರಾಬಾದ್, ಮುಂಬೈ, ಕೇರಳ, ತಮಿಳುನಾಡು ಕರ್ನಾಟಕದ ಅನೇಕ ಹಿರಿಯ ಹಾಗೂ ಕಿರಿಯ ಪತ್ರಕರ್ತರು ಭಾಗವಹಿಸಿದ್ದರು.

ತಾಯ್ತನದಂತಹ ಕ್ಲಿಷ್ಟಕರ ಸನ್ನಿವೇಶಗಳಲ್ಲಿ ಅತ್ಯಂತ ಅನುಭವಿ ಹಾಗೂ ಸಮರ್ಥ ಪತ್ರಕರ್ತರು ಕೆಲಸವನ್ನೇ ಬಿಡಬೇಕಾದಂತಹ ಅನೇಕ ಸನ್ನಿವೇಶಗಳು ಉದ್ಭವಗೊಳ್ಳುತ್ತಿದೆ. ಇಂತಹ ಸಂದರ್ಭಗಳಲ್ಲಿ ಮುಂದುವರಿದಿರುವ ತಾಂತ್ರಿಕತೆಯ ಉಪಯೋಗವನ್ನು ಪಡೆದುಕೊಂಡು ಅನುಕೂಲಕರ ಸಮಯದಲ್ಲಿ ಕೆಲಸವನ್ನು ನಿರ್ವಹಿಸುವಂತಹ ವ್ಯವಸ್ಥೆಯ ಅವಶ್ಯಕತೆ ಇದೆ ಎಂದು ಇಂಡಿಯನ್ ಎಕ್ಸ್‌ಪ್ರೆಸ್‌ನ ಹೈದರಾಬಾದ್ ವರದಿ ವಿಭಾಗದ ಮುಖ್ಯಸ್ಥೆ ರಶೀದಾ ತಿಳಿಸಿದ್ದಾರೆ.

ಇದೊಂದು ಸಮಯದ ಅಗತ್ಯ ಹಾಗೂ ಅನುಕೂಲಕ್ಕೆ ಸಂಬಂಧಿಸಿದ ವಿಷಯವಾಗಿದ್ದು ಅವಶ್ಯಕತೆ ಇದ್ದಾಗ ಪುರುಷ ಪತ್ರಕರ್ತರು ಈ ಸವಲತ್ತನ್ನು ಉಪಯೋಗಿಸಬಹುದಾಗಿದೆ. ಒಟ್ಟಾರೆ ಬೆಳೆಯುತ್ತಿರುವ ತಂತ್ರಜ್ಞಾನದೊಂದಿಗೆ ಅನುಕೂಲಕರ ಸಮಯ ಮೇಳೈಸಿದರೆ ಅನೇಕ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ ಎಂಬ ಅಭಿಪ್ರಾಯ ವ್ಯಕ್ತವಾಯಿತು.

ಮಹಿಳಾ ಪತ್ರಕರ್ತರು ತಮ್ಮದೇ ಆದ ಪ್ರಬಲ ವ್ಯವಸ್ಥಿತ ಸಂಪರ್ಕ ಜಾಲವೊಂದನ್ನು ಹೊಂದಬೇಕೆನ್ನುವುದರತ್ತ ತೀವ್ರ ಗಮನ ಸೆಳೆದ ಕೇರಳದ ಪಾರ್ವತಿದೇವಿ ಅವರು ಕೇರಳದಲ್ಲಿ ಎಲ್ಲರು ತಿಳಿದಿರುವಂತೆ ಸಾಕ್ಷರತೆ ಅತ್ಯಂತ ಹೆಚ್ಚಿದೆ, ಹಾಗೂ ತಾಯಿ ಪ್ರಧಾನ ಕುಟುಂಬಗಳಿದ್ದರು ಕೂಡ ಮಹಿಳಾ ಪತ್ರಕರ್ತರ ಸ್ಥಿತಿ ಅತ್ಯಂತ ಹೀನಾಯವಾಗಿದೆ.

ಪತ್ರಿಕೆಗಳನ್ನು ನಡೆಸುತ್ತಿರುವ ಅನೇಕ ಆಡಳಿತ ಮಂಡಳಿಗಳು ಮಹಿಳೆಯರಿಗಾಗಿ ಪ್ರತ್ಯೇಕ ಶೌಚಾಲಯದ ವ್ಯವಸ್ಥೆ ಮಾಡುವುದನ್ನು ಆರ್ಥಿಕ ಹೊರೆ ಎಂದು ಪರಿಗಣಿಸುತ್ತವೆ ಎಂದು ತಿಳಿಸಿದ ಅವರು ಮಹಿಳಾ ವಿರೋಧಿ ವ್ಯವಸ್ಥೆ ಅಲ್ಲಿದೆ ಎಂದರು. ಪತ್ರಕರ್ತರ ಕ್ಷೇಮಾಭಿವೃದ್ಧಿ ಸಂಘಗಳು ಅಲ್ಲಿದ್ದರು ಮಹಿಳಾ ಪತ್ರಕರ್ತರಿಗೆ ಯಾವುದೇ ಸಹಾಯವಾಗುತ್ತಿಲ್ಲ ಅದಕ್ಕಾಗಿ ಸಂಪರ್ಕ ಜಾಲಕ್ಕೆ ಹೆಚ್ಚಿನ ಒತ್ತನ್ನು ನೀಡಬೇಕು

ಆಂಧ್ರ ಪ್ರದೇಶದಲ್ಲಿ ಪರಿಸ್ಥಿತಿ ಅದಕ್ಕಿಂತ ಭಿನ್ನವಾಗೇನು ಇಲ್ಲ ಎಂದು ತಿಳಿಸಿದ ಅಲ್ಲಿಯ ಪತ್ರಕರ್ತೆಯರು ರಾಜ್ಯಮಟ್ಟದ ಐದು ಪತ್ರಿಕೆಗಳು ಮಾತ್ರ ನಡೆಯುತ್ತಿದೆ ಅದರಲ್ಲೂ ಮೂರು ಮುಚ್ಚುವ ಸ್ಥಿತಿಯನ್ನು ತಲುಪಿವೇ, ಅಲ್ಲಿ ಮಹಿಳೆಯರಷ್ಟೇ ಅಲ್ಲ ಪುರುಷರು ಪತ್ರಿಕೋದ್ಯಮದಲ್ಲಿ ಆಸಕ್ತಿಯನ್ನೇ ಕಳೆದು ಕೊಳ್ಳುತ್ತಿದ್ದಾರೆ ಏಕೆಂದರೆ ಪತ್ರಕರ್ತರಿಗೆ ಅಲ್ಲಿ ಯಾವುದೇ ರೀತಿಯ ಸೌಲಭ್ಯಗಳಿಲ್ಲ, ಗುತ್ತಿಗೆ ಆಧಾರದ ಮೇಲೆ 1 ಸಾವಿರ ರೂಗಳಿಗೆ ಕೆಲಸ ಮಾಡಬೇಕಾಗುತ್ತದೆ. ಹವ್ಯಾಸಿ ಪತ್ರಕರ್ತರನ್ನಂತು ಅಲ್ಲಿ ಯಾರು ಕೇಳುವರಿಲ್ಲ ಎಂದ ವೆಂಕಟಲಕ್ಷ್ಮಿ ಪರಿಸ್ಥಿತಿಯನ್ನು ವಿವರಿಸಿದ್ದಾರೆ.

ನಿರ್ಣಾಯಕ ಸ್ಥಳಗಳಲ್ಲಿ ಮಹಿಳೆಯರಿದ್ದಾರೆಯೇ ಹಾಗೂ ಪತ್ರಿಕೋದ್ಯಮದಲ್ಲಿ ಎಷ್ಟು ಮಂದಿ ಮಹಿಳೆಯರಿದ್ದಾರೆ ಅವರ ಬಲದಿಂದ ಬದಲಾಣೆಗಳನ್ನು ಬಯಸಲು ಸಾಧ್ಯವೇ, ಮಹಿಳಾ ಪತ್ರಕರ್ತರಿಂದ ಎಂತಹ ಸುದ್ದಿಗಳನ್ನು ಬಯಸುತ್ತಾರೆ ಹಾಗೂ ಪತ್ರಿಕೋದ್ಯಮದಲ್ಲಿ ಮಹಿಳೆಯರ ಕಾರ್ಯವ್ಯಾಪ್ತಿಯೇನು ಮಂತಾದ ಅನೇಕ ಪ್ರಶ್ನೆಗಳ ಬಗ್ಗೆ ಗಂಭೀರ ಚರ್ಚೆಗಳು ನಡೆದವು.

ರಾಜಕೀಯ ಸುದ್ದಿಗಳಿಗೆ ಅತ್ಯಂತ ಮಹತ್ವ ನೀಡುವ ಇಂದಿನ ಪತ್ರಿಕೋದ್ಯಮದಲ್ಲಿ ಮಹಿಳಾ ಪತ್ರಕರ್ತರಿಗೆ ರಾಜಕೀಯ ಸಂಬಂಧಿತ ವಿಶ್ಲೇಷಣೆ ಹಾಗೂ ವರದಿಗಳ ಕುರಿತು ಕೆಲಸ ನಿರ್ವಹಿಸುವ ಅವಕಾಶ ನೀಡುವುದಿಲ್ಲ. ಇಲ್ಲಿ ಸುದ್ದಿಗಿಂತ ಹೆಚ್ಚಾಗಿ ಯಾರು ಯಾರ ಬೆನ್ನಿನ ಹಿಂದೆ ಏನು ಮಾಡುತ್ತಿದ್ದಾರೆ, ಯಾರು ಯಾರ ಕಾಲೆಳೆಯುತ್ತಿದ್ದಾರೆ ಎನ್ನುವುದರತ್ತವೇ ಸುದ್ದಿ ಕೇಂದ್ರಿಕೃತವಾಗಿರುತ್ತದೆ ಎಂದು ಟೀಕಿಸಿದ ಕಲ್ಪನಾ, ವಾಣಿಜ್ಯ, ಕ್ರೀಡೆ ಮುಂತಾದವುಗಳ ಸುದ್ದಿಯನ್ನು ಯಶಸ್ವಿಯಾಗಿ ನೀಡುತ್ತಿರುವ ಸಂದರ್ಭದಲ್ಲಿ ರಾಜಕೀಯ ಸುದ್ದಿಯನ್ನು ನೀಡಲ ಸಾಧ್ಯವಿಲ್ಲವೇ? ಹಾಗೇ ನೋಡಿದರೇ ಸೀಮಾ ಮುಸ್ತಾಫ ರಾಜಕೀಯ ವಿಶ್ಲೇಷಣೆಯಲ್ಲಿ ಅತ್ಯಂತ ಸಮರ್ಥ ಹೆಸರು ಎಂದರು.

ವರದಿ ವಿಭಾಗಗಳಲ್ಲಿರುವ ಪತ್ರಕರ್ತರಷ್ಟೇ ಅಲ್ಲದೆ ವಿವಿಧ ವಿಭಾಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪತ್ರಕರ್ತರು ಗ್ರಾಮೀಣ ವರದಿಗಾರರು ಮುಂತಾದವರ ಸಮಸ್ಯೆಗಳ ಕುರಿತು ಚರ್ಚೆಗಳು ನಡೆದವು.

— ಸಂಗಾತಿ.

---

**ಹೊಸ ಗಾದೆ**

ತಿಂಗಳ ಮೊದಲಲ್ಲಿ SALARY

ತಿಂಗಳ ಕೊನೆಯಲ್ಲಿ ಸಾಲ-ರೀ!

*ಕದಂಬಾಡಿ ಆರ್. ವಿನೋದ್ ಮೇಕೇರಿ,*

---

# ಶತಮಾನದ ತಿರುವಿನಲ್ಲಿ ಭಾರತೀಯ ಸಂಸ್ಕೃತಿ

ಪ್ರಾಚೀನ ಭಾರತ ಅದೊಂದು ಸಂಸ್ಕೃತಿ ಹಾಗೂ ಭವ್ಯ ಪರಂಪರೆಯ ತವರೂರಾಗಿತ್ತು. ಸ್ನೇಹ-ಪ್ರೀತಿ-ಸೌಹಾರ್ದತೆಯ ನೆಲೆ ಬೀಡಾಗಿತ್ತು. ಪರಸ್ಪರ ಸುಖ-ದುಃಖಗಳಲ್ಲಿ ಭಾಗಿಯಾಗಿ ಪರರಿಗೆ ಸಹಾಯ ಹಸ್ತ ನೀಡುವ ಉತ್ತಮೋತ್ತಮ ಗುಣಗಳು ನಮ್ಮ ಹಿರಿಯರದಾಗಿತ್ತು.

ಆದರೆ ಇಂದು? ಆಧುನಿಕತೆಯ ಸೋಗಿನಲ್ಲಿ ನಾವು ಪಾಶ್ಚಾತ್ಯ ಸಂಸ್ಕೃತಿಗೆ ನಮ್ಮನ್ನೇ ಮಾರಿಕೊಂಡಿದ್ದೇವೆ. ಪಾಶ್ಚಾತ್ಯ ಜೀವನದ ಶೈಲಿಯನ್ನು ಅನುಕರಿಸಿ ಇಂಗ್ಲೀಷ್ ಮಾತನಾಡಿ ಅತ್ಯಾಧುನಿಕ ಉಪಕರಣವನ್ನು ಖರೀದಿಸಿದರೆ ಆಧುನಿಕ ಮನೋಭಾವ ಬಂದಂತೆ ಎನ್ನುವ ಅಳತೆ ಗೋಲಿನಿಂದ ಅಳೆಯಲ್ಪಡುತ್ತಿದೆ. ಇತ್ತೀಚಿನ ದಿನಗಳಲ್ಲಂತೂ ಸ್ವಹಿತ ಬದುಕಿನತ್ತ ಹೆಚ್ಚಿನ ಗಮನ ತನ್ನ ಬದುಕಿನ ಚೌಕಟ್ಟಿನಿಂದ ಹೊರ ಬರಲು ಚಡಪಡಿಸುವಿಕೆ, ಸ್ನೇಹದಲ್ಲೂ ಅಂತಸ್ತಿನ ಬಳಕೆ, ಅತಿಥಿಗಳು ಬಂದರೆ ಔಪಚಾರಿಕವಾದ ಮಾತುಗಳು ಇದಕ್ಕೆ ಕಾರಣ. ಮನೆ ಮನೆಗಳಲ್ಲಿ ಅನ್ಯ ಸಂಸ್ಕೃತಿಯನ್ನು ಬಿತ್ತರಿಸುವ ದೂರದರ್ಶನ ಮಾಧ್ಯಮಗಳು ಚಲನಚಿತ್ರ ಮಾಧ್ಯಮಗಳು ಕೂಡಾ ಪ್ರದರ್ಶಿಸುವ ಅತ್ಯಾಚಾರ ಭ್ರಷ್ಟಾಚಾರಗಳಿಂದ ಜನರು ತಮ್ಮ ತಮ್ಮಲ್ಲೇ ನಂಬಿಕೆಯನ್ನು ಕಳೆದುಕೊಳ್ಳುತ್ತಿದ್ದಾರೆ. ಪ್ರಾಮಾಣಿಕತೆ- ಮಾನವೀಯತೆಗಳು ಹೇಳ ಹೆಸರಿಲ್ಲದಂತಾಗಿದೆ. ಇಂದು ಎಲ್ಲೆಲ್ಲೂ ಸ್ವಾರ್ಥ ತಾಂಡವವಾಡುತ್ತಿದೆ. ವರ್ಗ ವರ್ಣಗಳ ಆಧಾರದಲ್ಲಿ ಔಪಚಾರಿಕವಾದ ಆದರಾತಿಥ್ಯಗಳು ನಡೆಯುತ್ತಿದೆ.

"ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ, ಅತಿಥಿದೇವೋಭವ ಎನ್ನುವ ಹಿರಿಯರ ನುಡಿ ಮುತ್ತುಗಳನ್ನು ನಾವು ಮರೆತ್ತಿದ್ದೇವೆ. ಸ್ನೇಹ-ಪ್ರೀತಿ, ವಿಶ್ವಾಸಗಳಿಂದ ಬಾಳಬೇಕಾದ ಸಮಾಜದಲ್ಲಿ ನಾವು ಹಿಂದಿನಿಂದಲೇ ಕತ್ತಿ ಮಸೆಯುವ ಕೆಲಸ ಮಾಡುತ್ತಿದ್ದೇವೆ. ಇಂದು ಎಲ್ಲರಿಗೂ ತಮ್ಮ ಮನೆ-ಸಂಸಾರ ಆಗತ್ಯವಿದೆಯೇ ಹೊರತು ಸಮಾಜದ ಚಿಂತನೆಗಳು ಆಗು ಹೋಗುಗಳು ಕಷ್ಟನಷ್ಟಗಳು ಬೇಕಾಗಿಲ್ಲ. ನಾವಿಂದು ನಮ್ಮ ಸ್ವಾರ್ಥಕ್ಕಾಗಿ ಮುಷ್ಕರ, ಪ್ರತಿಭಟನೆ ಮಾಡುತ್ತಿದ್ದೇವೆ ಹೊರತು ಕುಸಿಯುತ್ತಿರುವ ಮೌಲ್ಯಗಳಿಗಾಗಿ ಆಗಲೀ ಅಥವಾ ನಮ್ಮ ಸಂಸ್ಕೃತಿಯ ಅವನತಿ ತಡೆಯುವಲ್ಲಿ ಹೆಜ್ಜೆ ಇಡುತ್ತಿಲ್ಲ. ದೇವರು-ಗುರು-ಹಿರಿಯರ ಮೇಲಿನ ಭಕ್ತಿ-ಗೌರವಗಳು ಇಂದು ಹಾಸ್ಯಾಸ್ಪದವಾಗಿ ಕಾಣುತ್ತಿದೆ.

ನಾವು ಪಾಶ್ಚಾತ್ಯರಿಂದ ವಿಜ್ಞಾನ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವ ಪ್ರಯತ್ನಮಾಡುತ್ತಿಲ್ಲ ಬದಲಾಗಿ ಅವರ ಸಂಸ್ಕೃತಿಯನ್ನು ಭಾಷೆಯನ್ನು ಅನುಕರಣೆ ಮಾಡುತ್ತಿದ್ದೇವೆ. ಆಂಗ್ಲಭಾಷೆಯ ಅನುಕರಣೆ ಇಂದು ಎಲ್ಲೆಲ್ಲೂ ಪಸರಿಸಿದ. ಜನರು ತಮ್ಮ ಸುಂದರ ಮಾತೃಭಾಷೆ, ಸಂಸ್ಕೃತಿ ಮರೆತು ಆಂಗ್ಲಭಾಷೆಯ ಪರಿಜ್ಞಾನ ನಮ್ಮನ್ನು ಬಿಟ್ಟರೆ ಬೇರೆಯವರಿಗೆ ಗೊತ್ತಿಲ್ಲ ಎನ್ನುವ ಬಿಗುಮಾನದಿಂದಲೇ ಇತರರನ್ನು ಕೀಳಾಗಿ ನೋಡುವುದು ಎಂಥಾ ವಿಪರ್ಯಾಸ.

ಇಲ್ಲಿ ಆಂಗ್ಲ ಭಾಷೆಯ ಬಗ್ಗೆ ವಿರೋಧ ಇರುವುದು ಭಾಷೆಗಾಗಿ ಮಾತ್ರ ಅಲ್ಲ ಎಂಬುದನ್ನು ನಾವು ನೆನಪಿಡಬೇಕು. ಆಂಗ್ಲ ಭಾಷೆಯ ಜೊತೆ ನಮ್ಮ ಭಾರತೀಯ ಜನಜೀವನದಲ್ಲಿ ಬೇಕಾಗಿಯೋ ಬೇಡವಾಗಿಯೋ ತೂರಿಕೊಂಡು ಬರುವ ಇಂಗ್ಲಿಷ್ ಸಂಸ್ಕೃತಿಯ ಕುರಿತು ನಾವು ವಿರೋಧಿಸಲೇಬೇಕು.

ಪಾಶ್ಚಿಮಾತ್ಯ ಸಂಸ್ಕೃತಿಯ ಮುಖವಾಡದ ಹಿಂದೆ ನಮ್ಮತನ ನಮ್ಮ ಸಂಸ್ಕೃತಿಯ ಮರೆವು ಇಂದು ನಮ್ಮ ಸಮಾಜವನ್ನು ಅವನತಿಯತ್ತ ಕೊಂಡೊಯ್ಯುತ್ತೇವೆ. ಈ ಸಂದರ್ಭದಲ್ಲಿ ನಾವೆಲ್ಲರೂ ಜಾಗೃತರಾಗಿ ನಶಿಸಿ ಹೋಗುತ್ತಿರುವ ನಮ್ಮ ಸಂಸ್ಕೃತಿಯ ರಕ್ಷಕರಾಗಬೇಕಾದ ಅನಿವಾರ್ಯತೆ ಖಂಡಿತಾ ಇದೆ.

— ಬಾಳಿಕಲ ಯಶೋಧ ರಾಘವ, ಸುಳ್ಯ

---

## ಸಂಸಾರ ಸುಖದ ನೆಲೆ ಯಾವುದು?

ಸಂಕಟ, ಸಂತೋಷಗಳೆಡೂ ಬೆರೆತಿರುವ ಸಾರವೆ ಸಂಸಾರ. ಕಷ್ಟ ಬಂದಾಗ ಕುಗ್ಗದೆ, ಸುಖ ಬಂದಾಗ ಹಿಗ್ಗದೆ, ಹಣವನ್ನು ದುಂದು ವೆಚ್ಚ ಮಾಡದೆ, ಮುಂದಾಗುವ ಮುದ್ದು ಮಗುವಿನ ಭವಿಷ್ಯವನ್ನು ಗಮನದಲ್ಲಿಟ್ಟುಕೊಂಡು, ಹಿರಿಯರನ್ನು ಗೌರವಿಸುತ್ತ, ದೇವರನ್ನು ಧ್ಯಾನಿಸುತ್ತ, ನೆರೆಹೊರೆಯವರಿಗೆ, ಒಳ್ಳೆಯವರಾಗಿ, ಎಲ್ಲರಿಗೂ ಒಳಿತನ್ನು ಮಾಡುವ ಒಬ್ಬರಿಗೊಬ್ಬರು ಅರ್ಥ ಮಾಡಿಕೊಳ್ಳುವ ದಂಪತಿಗಳಿಬ್ಬರು ಸತಿಪತಿಯಾಗಿ ಸಿಕ್ಕಿದರೆ ಖಂಡಿತ ಅವರ ಬಾಳು ಸ್ವರ್ಗ ಸದೃಶ್ಯವಾಗುತ್ತದೆ. ಹೀಗೆ ಸಂಸಾರ ಸುಖದ ನೆಲೆಯೇ ಗಂಡ- ಹೆಂಡಿರು ಒಬ್ಬರನ್ನೊಬ್ಬರು ಅರಿತು ವರ್ತಿಸುವುದರಲ್ಲಿದೆ, ಹೊಂದಿಕೊಂಡು ಬಾಳುವುದರಲ್ಲಿದೆ,

ಹೆಂಡತಿಯಾದವಳಿಗೆ ಆಸೆ ಜಾಸ್ತಿ ಇದ್ದು ಗಂಡ ತರುವ ಹಣ ಸಾಲದೆಂದು ಗೊಣಗುತ್ತ ಆತನಿಗೆ ದುಃಖ ಉಂಟುಮಾಡುವವಳಾದರೆ, ಪತಿಯಾದವನು ತಾಳ್ಮೆಯಿಂದ ದುರಾಸೆ ಒಳ್ಳೆಯದಲ್ಲವೆಂದು ಅವಳಿಗೆ ತಿಳಿಹೇಳಿ ಹಣದಿಂದ ಉಂಟಾಗುವ ಕಷ್ಟಗಳನ್ನು ಮನವರಿಕೆ ಮಾಡಬೇಕು. ಮನಃಶಾಂತಿ ಪಡೆಯಲು ಸಹಾಯವಾಗುವ ಜಪ, ಧ್ಯಾನ, ಯೋಗ, ಮೊದಲಾದುವುಗಳಲ್ಲಿ ಆಕೆಯನ್ನು ತೊಡಗಿಸಬೇಕು. ಹೀಗೆ ದಾಂಪತ್ಯ ರಥವು ಸರಾಗವಾಗಿ ಸಾಗಲು ಬೇಕಾದ್ದು, ಸುಖವು ಸಂಸಾರದಲ್ಲಿ ಮಡುಗಟ್ಟಿ ನಿಲ್ಲಲು ಬೇಕಾದ್ದು, ಹಣದ ರಾಶಿ ಅಲ್ಲ, ದೈವೀಗುಣಗಳ ರಾಶಿ. ಅಂತೂ ದೇಹದ ಕಡೆಗಿಂತಲೂ ದೇವರ ಕಡೆಗೇ, ಹೊರಗಿನ ಸೌಂದರ್ಯಕ್ಕಿಂತಲೂ ಒಳಗಿನ ಸೌಂದರ್ಯದ ಕಡೆಗೆ ಹೆಚ್ಚು ಗಮನ ಹರಿಯುವಂತಾಗಬೇಕು. ಆಗ ಮನೆಯೇ ಗುಡಿಯಾಗುತ್ತದೆ. ಕೆಲಸವೇ ಪೂಜೆ ಆಗುತ್ತದೆ. ಅದರಿಂದಲೇ ಸುಖ ಸಮೃದ್ಧಿ.

— ಕೆದಂಬಾಡಿ ಆರ್. ವಿನೋದ್, ಮೇಕೇರಿ.

---

ಮಗಳು ವಿಧವೆಯಾದರೂ ಪರವಾಗಿಲ್ಲ, ಅಳಿಯನ ಹೊಗೆ ನೋಡಿಯೇ ಶುದ್ಧ

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ - 21

ಹಿಂದೆ ನಡದದ್.......

C.B.I. ಇನ್‌ಸ್ಪೆಕ್ಟರ್ ವೇಷಲಿ ಒಂದು ರೆಡಿಮೇಡ್ ಬಟ್ಟೆನ ತಯಾರಿಸುವ ದೊಡ್ಡ ಒಂದ್ ಫ್ಯಾಕ್ಟರಿಲಿ ನಡಿಯುತಿದ್ದ ಅವ್ಯವಹಾರಗಳ ಬಗ್ಗೆ ಚೆಕಿಂಗ್ ಮಾಡಿ ಹೋಗಿ ಅಲ್ಲಿನವುಕೆ ಸಕತ್ ರೋಪ್ ಹಾಕಿ ಬಂದಿತ್. ಹಂಗೆ ಮಾರನೆ ದಿನ ಅರಸಿಕೆರೆಲಿ ಇರುವ ಭಾವನ ಮನೆಗೆ Mr. ರಾಜು ಹೊರಟತ್. ಆದರ್ರೆ ಅಲ್ಲಿ ತನ್ನ ಭಾವ ಇರ್ದುಲೆ. ಅವು ಬೇರೆ ಊರಿಗೆ ಹೋಗಿದ್ದ್‌ದರಿಂದ ಇಂವ ಅಂದ್ ರಾತ್ರಿನೇ ಪುನಃ ವಾಪಾಸ್ ಮೈಸೂರು ಕಡೆಗೆ ಒಂದ್ ಲಕ್ಷುರಿ ಬಸ್‌ಗೆ ಹತ್ತಿದೆ...........

ಮುಂದಕೆ...........

ಅರಸಿ ಕೆರೆಲಿ ಊಟಕ್ಕೋಸ್ಕರ ಬಸ್ಸ್‌ಂದ ಕೆಳಗೆ ಇಳ್ದ ಜನ ಬೇಗ ಬೇಗ ತಮಿಗೆ ಬೇಕಾದ ತಿಂಡಿನ ತಕಂಡ್ ಕೆಲವು ಜನ ಟೀ ಕುಡ್ದ್ ಸಿಗರೇಟ್, ಜರ್ದಾ ಹಿಂಗೆಲ್ಲಾ ತಕಂಡ್ ಆದ ಮೇಲೆ ಪುನಃ ತಮ್ಮ ಪ್ರಯಾಣನ ಮೈಸೂರು ಕಡೆಗೆ ಮುಂದುವರಿಸಿದೊ. ಚನ್ನರಾಯಪಟ್ನ ದಾಟಿ, ಕಿಕ್ಕೇರಿ ಹತ್ರಕೆ ಬರುತಾ ಇದ್ದೊ. ಅಷ್ಟೊತ್ತಿಗೆ ಆ ಕತ್ತಲೆ ಒಳಗೆ ಒಬ್ಬ ದಾಂಡಿಗ ಡ್ರೈವರ್‌ನ ತಲೆಗೆ ಕಬ್ಬಿಣದ ರಾಡ್‌ಂದ ಪಟ್ಟ್‌ತ್ತೇಳಿ ಒಂದೇಟ್ ಹಾಕಿತ್. ಆಗ ಡ್ರೈವರ್ ಗಾಭರಿಲಿ ಒಳಗಡೆಯ ಲೈಟ್‌ನ ಹಾಕಿತ್. ಹಿಂದುಗಡೆ ನಿಂತಿದ್ದ ಒಬ್ಬ ರೌಡಿ ಒಬ್ಬ ಪ್ಯಾಸಂಜರ್ ಕುತ್ತಿಗೆಗೆ ಚಾಕುಂದ ಕುತ್ತಿತ್. ಅವನ ಕುತಿಗೆಂದ ರಕ್ತ ಚಿಲ್ಲನೆ ಹಾರ್ತ್. ಅಂವ ಭಯಂಕರ ಆಗಿ ಕಿರುಚಿಕಂಡತ್. ಆಗ ಇನ್ನೂ ಇಬ್ಬರು ರೌಡಿಗ ಮದ್ಯದ ಸೀಟ್‌ಲಿದ್ದವಕೆಲ್ಲಾ ತನ್ನ ಚಾಕುಂದ ಚುಚ್ಚಿ ಚುಚ್ಚಿಕೆ ಸುರು ಮಾಡ್ತ್. ಬಸ್ ನಿಧಾನ ಆಗಿ ಪಕ್ಕಕೆ ಸೈಡ್ ತಕಂಡ್ ನಿಂತತ್. ಈ ನಾಲ್ಕು ಜನ ರೌಡಿಗಳೂ ಉದ್ದುದ್ದದ ಚಾಕುನ ಬಲಗೈಲಿ ಹಿಡ್ಡಿದ್ದೋ. ಎಲ್ಲರನ್ನೂ ದುರುಗುಟ್ಟಿನೋಡಿಕಂಡ್ ಯಾರಾದ್ರೂ ಒದ್‌ರಾಡ್ರೇ ಅವರ್ನ ಬಗ್ದ್ ಸಾಯಿಸಿಬುಡ್ತೀವಿ ತುಟಿ ಪಿಟ್‌ಕೆನ್ನದೆ ನಾವು ಕೇಳಿದನ್ನ ಕೊಟ್ಟ್ ಜೀವ ಉಳ್ಸಿಕಣಿ, ಇಲ್ಲಾ ಸಾಯಿರಿ ತ್ತಾ ಬಸ್ ಗುಡುಗಿ ಹೋಗುವಂಗೆ ಹೇಳ್ದೊ. ಡ್ರೈವರಿಗೆ ತಲೆಗೆ ಬಿದ್ದ ಪೆಟ್ಟ್‌ಂದ ಅಂವ ಸೊಯ ಇಲ್ದೆ ಸ್ಟೇರಿಂಗ್ ಮೇಲೆ ತಲೆನ ಒರಗಿಸಿ ಬಿದ್ದು ಹೋಗಿತ್. ಇವು ಹಾಂ. ಜಲ್ದೀ... ಜಲ್ದೀ ನಿಕಾಲೋ ತಾ ಹೇಳಿಕಂಡ್ ಒಬ್ಬೊಬ್ಬರಿಗೂ ಚಾಕುಂದ ಚುಚ್ಚಿ ಚುಚ್ಚಿ ಕೇಳ್ತಿದ್ದೊ. ಪಾಪ ಈ ಜನ ಪ್ರಾಣ ಭಯಲಿ ಅವು ಕೇಳ್ದ್‌ಂಗೆ ಕೈಯಿಂದ, ಕುತಿಗೆಂದ, ಕೆಮಿಂದ, ಉಂಗುರ, ಬಳೆ, ವಾಲೆ, ಜೋಬುಂದ ಹಣ ಹಿಂಗೆಲ್ಲಾ ತೆಗ್ದ್ ತೆಗ್ದ್ ಕೊಡ್ತಿದ್ದೊ. ಕಂಡೆಕ್ಟರ್ ಒಬ್ಬೊಬ್ಬರಿಂದ ಟಿಕೇಟ್ ಹಣನ ವಸೂಲು ಮಾಡುವಂಗೆ ಒಂದ್ ಕಡೇಂದ ಇವು ದೋಚಿಕೆ ಸುರುಮಾಡ್ದ್ ಒಂದ್ ನಿಮಿಷದ ಒಳಗೆ ಪೂರ್ತಿ ಬಸ್ಸೇ ದರೋಡೆ ಆಗುವಂಗೆ ನಡ್ದ್ ಹೋತ್. ಎಲ್ಲವರ್ಗೂ ಚೀರಾಟ ನರಳಾಟ ಜೋರಾತ್. ಆಗ ಈ ಗ್ಯಾಂಗ್‌ನ ನಾಯಕ ರಾಜುನ ಎದುರುಗಡೆ ಕುದ್ದಿದ್ದ ದಡೂತಿ ಹೆಂಗಸ್ಸ್‌ನ ಬೆರಳ್‌ಂದ ಉಂಗುರನ ಜಾರಿಸಿಕಂಬಕೆ ಕೈಹಾಕಿತ್. ಅದ್ ತುಂಬಾ ಟೈಟ್ ದಪ್ಪ ಉಂಗುರ ಬೇರೆ. ಹಂಗಾಗಿ ಒಂದ್ ಕೈಲಿ ಚಾಕ್‌ನ ಹಿಡಕಂಡ್ ಇನ್ನೊಂದು ಕೈಯಿಂದ ಅವಳ ಬೆರಳ್‌ನ ಹಿಡ್ಕಂಡ್ ಕಿತಾಡ್‌ತಿತ್. ಇವನ ಮಣಿ ಗಂಟ್ ಮೇಲೆ ಕೊಡಲಿ ಪೆಟ್ಟ್ ಒಂದ್ ಬೀತ್. ಈ ಏಟಿಗೆ ಇವನ ಕೈಲಿದ್ದ ಚಾಕು ಎಗರಿ ಹೋಗಿ ಕೈ ಸೀಟ್‌ನ ಕಬ್ಬಿಣದ ರಾಡಿಗೆ ಬಡ್ತ್. ಇವನ ಮೊಣಕೈ ಮೂಳೆ ಮುರ್ದ್ ಹೋತ್. ಅಂವ ತಿರುಗಿ ನೋಡಿಕಂಡ್ ಮೇಲೆ ಏಳಿಕೆ ಮೊದ್ಲ ಅವನ ಕುತ್ತಿಗೆ ಮೇಲೆ ಮೊಣಕೈಯಿಂದ ಒಂದ್ ಗುದ್ದ್ ಬೀತ್. ಇದರ ರಭಸಕ್ಕೆ ಅಂವ ಆ ಸೀಟ್ ಸೆರೆಲಿ ಸಲೀಸಾಗಿ ನುಗ್ಗಿ ಹೋತ್. ಆಗ ಆ ಹೆಂಗಸ್ ಮತ್ತೆ ಅವಳ ಗಂಡ ಇವನ ಕೆಳಗೆ ಅದುಮಿ ಹಿಡ್ದ್ ಕೈಲಾಗುವಷ್ಟು ಗುದ್ದು ಹಾಕುತಿದ್ದೊ.

ಮುಂದೆ ಸೀಟ್‌ಲಿ ವಸೂಲಿಗೆ ನಿಂತಿದ್ದವನ ಎದೆಗೆ ಸರಿಯಾಗಿ ರಾಜು ಕೈಯಿಂದ ಒಂದ್ ಪಂಚ್ ಬೀತ್. ಅಂವ ತಳ್ಳರಿಸ್‌ಕಂಡ್ ಮೇಲೆ ಎದ್ದ್ ನೋಡ್‌ಕ್‌ನ ಅವನ ಕೈ ಮೇಲಿದ್ದ ರಾಡಿಗೆ ಬಡ್ದ್ ಹೋಗಿ ಅವನ ಚಾಕೂ ಹಾರಿ ಹೋತ್. ಹಿಂಗೆ ರಾಜುನ ಒಂದೊಂದು ಏಟಿಗೆ ಎರಡೆರಡ್ ಎಫೆಕ್ಟ್ ಆಗ್‌ತಿತ್ತ್. ಅಷ್ಟರಲ್ಲಿ ಅವನ ಹಣೆಗೆ ಒಂದು ಮುಷ್ಠಿ ಪಂಚ್ ಆತ್. ಅವನ ತಲೆ ಚಕ್ಕರ್ ಹೊಡೀತಿತ್. ಅಷ್ಟೋತ್ತಿಗೆ ಹಾರಿ ಹೋಗಿದ್ದ ಚಾಕ್‌ನ ಯಾರೋ ಎತ್ತಿ ರಾಜುನ ಕೈಗೆ ಕೊಟ್ಟೊ. ಅದೆ ಚಾಕುನ ಹಿಡ್ದ ರಾಜು ಈ ದಾಂಡಿಗನ ಎದೆಗೆ ನೆಟ್ಟೆಂಗೆ ಚುಚ್ಚಿತ್ ಆ ಚಾಕು ಅವನ ಎದೆ ಒಳಗೇ ಉಳ್ದ್ ಹೋತ್. ಅಂವ ಆ ಚಾಕ್‌ನ ಹಿಡ್‌ಕಂಡೇ ಬಾಗ್ಲಿಂದ ಕೆಳಗೆ ಹಾರ್ತ್. ಅಷ್ಟ್ ಹೊತ್ತಿಗೆ ಹಿಂದ್‌ಗಡೆ ಇದ್ದಂವ ಚಾಕುನ ಮುಂದೆ ಹಿಡ್‌ಕಂಡೆ ಮುನ್ನುಗ್ಗಿ ಓಡಿ ಬಾತ್. ಆಗ ಒಬ್ಬ ಪ್ಯಾಸೆಂಜರ್ ಅವನ ಕಾಲಿಗೆ ಅಡ್ಡ ಕೊಕ್ಕೆ ಹಾಕಿತ್. ಅಂವ ಹಂಗೇ ಆ ಪ್ಯಾಸೇಜ್‌ಲಿ ಕಂಪರ ಆಗಿ ಬಿದ್ದತ್. ಅಂವ ಮೇಲೆ ಏಳಿಕೆ ಮೊದ್ಲ ರಾಜುನ ಬೂಟ್ಸ್ ಕಾಲ್‌ಂದ ಅವನ ಪಡನೆಟ್ಟೆ ಮೇಲೆ ತೂಕವಾದ ಒಂದ್ ಒದೆ ಬೀತ್. ಆಗ ಅವನ ಹಣೆ ಕೆಳಕ್ಕೆ ಹಾಕಿದ ಸೀಟ್‌ಗೆ ಹೊಡ್ದ್ ಹಣೆ ಒಡ್ದ್ ಹೋತ್. ಆಗ ಪಕ್ಕದವು ಅವನ ಮೇಲೆ ಸ್ಪೀಡಾಗಿ ಒದಿಯಕೆ ಸುರುಮಾಡಿದೊ.

ಈ ಅಪಾಯನ ಕೊನೇಲಿ ಇದ್ದ ರೌಡಿ ನೋಡಿ ಹೆಂಗಾದ್ರೂ ಮಾಡಿ ಇಲ್ಲಿಂದ ಹೊರಗೆ ಓಡಿ ಬುಡೋಕು ತಾ ಗೇನ ಮಾಡಿ ಕಂಡ್ ಎಲ್ಲವರನ್ನ ತಳ್ಳಿಕಂಡ್ ಬುಡ್ಸಿಕಂಡ್ ಮುಂದೆ ಬಾತ್. ಅಷ್ಟೋತ್ತಿಗೆ ಅಲ್ಲಿದ್ದ ಜನ ಎಲ್ಲಾ ಸೇರಿ ಅವನ ಚೂರಿ ಏಟ್‌ನ ತಿಂದ್ ಕಂಡ್ ಅವನ ಎರಡೂ ಕೈನ ಹಿಡ್ದ್ ಬುಟ್ಟಿದ್ದೊ. ಆಗ ರಾಜು ಎದ್‌ರ್‌ಗಡೇಂದ ಒಂದೇ ಒಂದ್ ಕಿಕ್ ಅದ್ ಅವನ ಸೆಂಟ್ರಿಗೆ ಬೀತ್. ಅಂವ ಈ ಏಟ್‌ನ ತಡಿಯಕೆ ಬೊತ್ತದೆ ತನ್ನ ತೊಡೆಗಳಿಂದಲೇ ತರಡ್ ಬೀಜನ ಮುಚ್ಚಿಕಂಬಕೆ ಒದ್ದಾಡ್‌ತ್.

ಆಗ ರಾಜು ಅವನ ತಲೆನ ಹಿಡ್ದ್ ಕಬ್ಬಿಣದ ಕಂಬಕ್ಕೆ ಎರಡ್ ಸರ್ತಿ ಹೊಡ್ದ್ ಆಗ ಆ ಕೊನೇ ರೌಡಿ ತ್ರಾಣ ಇಲ್ಲದೆ ಈ ಮೂರನೇ ರೌಡಿ ಮೇಲೇ ಬಿದ್ದ್ ಹೋತ್.

ಅಷ್ಟೊತ್ತಿಗೆ ಕೆಲವು ಪ್ರಯಾಣಿಕರ್ ಬಸ್ಸ್‌ಂದ ಕೆಳಗಡೆಗೆ ಇಳ್ದ್ ಹೊರಗೆ ಹಾರಿದ ದರೋಡೆಕೋರನ ಹುಡ್ಕಿಕೆ ಶುರು ಮಾಡ್ದೊ. ರಾಜೂ ಕೂಡಾ ಇವರ ಜೊತೆಗೆ ಹಾರಿ ಇಳ್ತ್. ಎದೆಗೆ ಚಾಕು ಏಟ್ ಬಿದ್ದಂವ ಇಲ್ಲೇ ಎಲ್ಲಾದ್ರೂ ಬಿದ್ದಿರೋಕು ತಾ ಅಲ್ಲೇ ಸುತ್ತ ಮುತ್ತ ಹುಡುಕಾಡಿದೊ. ಅದ್ರೇ ಆ ಕತ್ತಲೆ ಒಳಗೆ ತುಂಬಾ ದೂರ ಹೋಗಿ ಹುಡುಕುದು ಕಷ್ಟ ಆಗಿಹೋತ್. ಸರಿ ಎಲ್ಲಾ ವಾಪಾಸ್ ಬಂದೊ. ಇಲ್ಲಿ ಹಂದಿಗಳಂಗೆ ಪ್ರಜ್ಞೆ ತಪ್ಪಿ ಬಿದ್ದಿದ್ದ ಈ ಮೂರು ಜನ ರೌಡಿಗಳನ್ನೂ ಒಬ್ಬೊರಂತೆ ಕೆಳಗೆ ಎಳ್ದ್ ಹಾಕಿದೊ. ರಾಜುನ ಜೊತೆಗೆ ಇನ್ನೂ ಕೆಲವು ಗಂಡ್ ಜನ ಸೇರಿಕಂಡ್ ಒಬ್ಬೊಬ್ಬರ ಕೈಕಾಲ್‌ಗಳ ಹೆಣ್ಣ್ ಜನ ಕೊಟ್ಟಂತಹ ವೇಲ್ ಗಳಿಂದ ಸೀರೆಬಟ್ಟೆಗಳಿಂದ ಬಿಗ್ದ್ ಕಟ್ಟಿದೊ. ಇಷ್ಟೆಲ್ಲಾ ಗಲಾಟೆ ನಡ್ದ್‌ರನೂ ಕೂಡಾ ಕೆಲವು ಬೊಜ್ಜು ಬಂದ ಕುಂಬರ್ಕರ್ಣ ಜಾತಿಕೆ ನಿದ್ರೆಂಧನೇ ಎಚ್ಚರ ಆಗಿತ್‌ಲ್ಲೆ. ಎಲ್ಲಾ ಗಲಾಟೆನೂ ಕೇವಲ ಮೂರೇ ನಿಮಿಷಲಿ ನಡ್ದ್ ಹೋಗಿತ್. ಅವು ಎಚ್ಚರ ಆಗಿ ಏನಾತ್? ಏನಾತ್? ತಾ ಕೇಳ್ದೊ. ಅಷ್ಟೊತ್ತಿಗೆ ಡ್ರೈವರಿಗೆ ತಿರುಗಿ ಸೊಯ ಬಾತ್ ಅಂವ ತಲೆನ ಹಿಡ್‌ಕಂಡ್ ಅವನ ಸೀಟ್‌ದ ಕೆಳಗೆ ಇಳ್ದ್ ಬಾತ್.

ರಾಜು ಈ ಮೂರು ಜನ ಇನ್ ಒದ್ದಾಡದಂಗೆ ಕಟ್ಟಿ ಹಾಕಿ ಆದ ಮೇಲೆ ಆ ಬಸ್ಸಲಿದ್ದ ಫಸ್ಟ್ ಏಡ್ ಬಾಕ್ಸ್‌ನ ಒಡ್ದ್ ಅದರೊಳಗಿದ್ದ ಟಿಂಕ್ಚರ್‌ನ ಮತ್ತೆ ಹತ್ತಿ, ಬ್ಯಾಂಡೇಜ್ ಬಟ್ಟೆನ ತೆಗ್ದ್ ಹರ್ದ್ ಮೊದಲು ಡ್ರೈವರ್‌ನ ತಲೆಗೆ ಟಿಂಕ್ಚರ್‌ನ ಸವರಿ ಬ್ಯಾಂಡೇಜ್ ಮಾಡ್ತ್. ಇನ್ನೂ ಕೆಲವು ಜನ ಗಾಯ ಆದುವುಕೆಲ್ಲಾ ಅಲ್ಲಿದ್ದ ಟಿಂಕ್ಚರ್‌ನ ಹಚ್ಚಿ ಬ್ಯಾಂಡೇಜ್ ಕಟ್ಟಿ ಕೊಡಿಕೆ ಸಹಾಯ ಮಾಡಿದೊ.

ಆ ಮೇಲೆ ಅಲ್ಲಿದ್ದ ಜನ ಎಲ್ಲಾ ಒಟ್ಟಿಗೆ ಸೇರಿ ಕಂಡ್ ತಾವೆಲ್ಲಾ ಈಗ ಸ್ವಲ್ಪ ಹೊತ್ತ್‌ಲಿ ಬಿಚ್ಚಿ ಕೊಟ್ಟಂತಹ, ಬಳೆ, ಸರ, ಉಂಗುರ, ವಾಲೆ, ಜುಮುಕಿ ಹಂಗೆ ಹಣ ಇಂತವುಗಳಿಗೆಲ್ಲಾ ಆ ದರೋಡೆಕೋರರ ಜೋಬೊಳಗಿಂದ ಶೋಧಿಸಿ ಹೊರಗೆ ತೆಗ್ದೊ. ಅವುಕೆಲ್ಲಾ ಈಗ ತುಂಬಾ, ತುಂಬಾ ಖುಷೀ ಆಗಿ ಹೋತ್, ತಮಗೆ ಬಿದ್ದಿದ್ದ ಸಣ್ಣ ಪುಟ್ಟ ಚಾಕು ಏಟ್‌ನ ಬೇನೆನ ಮರ್ತ್ ಈ ರಾಜು ಮಂಜ್ನನ ಬಹಳ ಆಗಿ ಅಭಿನಂದಿಸಿದೊ. ಕೆಲವು ಪ್ರಯಾಣಿಕರೂ ಗೇನ ಬಾಕಾಕನೆಲ್ಲಾ ಈ ಕೈಕಾಲ್ ಕಟ್ಟಿಸಿ ಕಂಡ ದರೋಡೆಕೋರರ ಮೊಕಕ್ಕೆ, ತಲೆಗೆ ಬೂಟ್‌ಗಾಲ್‌ಲಿ ಒದ್ದು ಕೊಂಬತಿದ್ದೊ. ಆಗ ರಾಜು ಇವರನೆಲ್ಲಾ ತಡ್ದ್ ಇವಾಗ ನೀವೆಲ್ಲಾ ಸಮದಾನದಲ್ಲಿರೋಕು ಇವರ ನಾವು ಎತ್ತಿಕೊಂಡ್ ಹೋಗಿ ಇಲ್ಲೇ ಕಿಕ್ಕೇರಿ ಪೋಲಿಸ್ ಸ್ಟೇಶನ್‌ಗೆ ಕೊಟ್ಟು ಬುಡೋಕ್, ಮುಂದಿನ ಕೆಲ್ಸ ಅವುಕೆ ಸೇರ್ದ್, ಹೂಂ ಎತ್ತಿಹಾಕೊಳ್ಳಿ ಬಸ್ಸಿನೊಳಕೆತ್ತೇಳ್ತ್.

ಎಲ್ಲವಕ್ಕೂ ಮೃತ್ಯು ಕೋಪದಿಂದ ಪಾರಾದ ನೆಮ್ಮದಿಯಿಂದ ಈ ಮೂರು ಮಾಂಸದ ಮುದ್ದೆಗಳ ಒಬ್ಬೊಬ್ಬರನ್ನಾಗಿ ಎಳ್ಕಂಡ್ ಬಂದ್ ಬಸ್ಸುನ ಒಳಗೆ ತುಂಬಿಕೊಂಡೊ. ಕಿಕ್ಕೇರಿ ಪೋಲಿಸ್ ಸ್ಟೇಶನ್ ಎದುರುಗಡೆ ಈ ಬಸ್ ನಿಂತತ್. ಆಗ ಒಳಗಿದ್ದ ಜನ ಈ ಕಟ್ಟಿಹಾಕಿದ ಈ ಮೂಟೆಗಳ ಎಳ್ದ್ ಎಳ್ದ್ ಹೊರಗೆ ಹಾಕಿದೊ. ರಾಜು ಸ್ಟೇಶನ್ ಒಳಗೆ ಹೋಗಿ ಇನ್‌ಸ್ಪೆಕ್ಟರ್ ತಮ್ಮಯ್ಯನ್ನೊಟ್ಟಿಗೆ ನಡೆದ ವಿಚಾರನ ಹೇಳಿ ಈ ದರೋಡೆಕೋರರನ್ನ ಕಸ್ಟಡಿಗೆ ತಕೊಂಬಕೆ ಹೇಳ್ತ್. ಅಷ್ಟೊತ್ತಿಗೆ ಅಲ್ಲಿದ್ದ ಪೋಲಿಸ್‌ನವು ಬಸ್ ಹತ್ರಕ್ಕೆ ಓಡಿಹೋಗಿ ಇವು ಎಳ್ದ್ ಹಾಕಿದ ಈ ಜನರ ಹೊತ್‌ಕಂಡ್ ಸ್ಟೇಶನ್ ಒಳಗೆ ತಾಕೆ ಕೈ ಸೇರ್ಸಿದೊ. ಆಗ ಇನ್‌ಸ್ಪೆಕ್ಟರ್ ತಮ್ಮಯ್ಯ ಈ ಭಯಂಕರ ರಸ್ತೆ ದರೋಡೆಕೋರರನ್ನ ಸದೆ ಬಡ್ದ್ ಅವರ ಕೆಳಗೆ ಬೀಳ್‌ಸಿ ಹಿಂಗೆ ಅವರ ಕೈಕಾಲ್‌ನ ಕಟ್ಟಿ ಹಾಕಿ ತಂದುದರ ನೋಡಿ ಬಹಳ ಆಶ್ಚರ್ಯ ಪಟ್ಟ್ ಖುಷಿ ಪಟ್ಟ್ ಕಂಡೊ. Mr.ರಾಜುನ ಬಹಳ ಅಭಿನಂದಿಸಿ ಆಲಂಗಿಸಿ ಸಹಬ್ಬಾಸ್ Mr. ರಾಜು ನೀನ್ ಬಹಳ ವೀರತನದಿಂದ ಧೈರ್ಯವಾಗಿ ಹಿಡ್ದ್ ತಂದು ಬುಟ್ರಿ, ಇವ್ರನ್ನ ನಮ್ಮ ಡಿಪಾರ್ಟ್‌ಮೆಂಟ್ ನವು ಬಹಳ ವರ್ಷಗಳಿಂದಲೂ ಬಹಳ ಖರ್ಚುಮಾಡಿಕಂಡ್ ಕಷ್ಟಪಟ್ಟೊಳೋ ಭೇಷ್ ರಾಜು ನಿಂಗೆ ನಮ್ಮ ಇಲಾಖೆಂದ ಶೌರ್ಯಚಕ್ರ ಬಹುಮಾನನ ಕೊಡ್ಸಿನೆ ತ್ತಾ ಹೇಳಿ ಅವನ ತಲೆಮೇಲೆ ಸವರಿಕಂಡ್ ಆ ಬಸ್ಸಲಿದ್ದ ಜನರಿಗೆ ಹೇಳ್ತ್. ನೋಡಿ ಈ ಒಬ್ಬ ಧೈರ್ಯವಂತ ಹೈದ ನಿಮ್ಮ ಬಸ್ಸಿನಲ್ಲಿದ್ದದ್ದು ನಿಮ್ಮೆಲ್ಲರ ಹಾಗೂ ನಮ್ಮೆಲ್ಲರ ಅದೃಷ್ಟ. ಇವನಿಲ್ಲದೇ ಹೋಗಿದ್ರೆ ಈ ದಿನ ನೀವೆಲ್ಲಾ ನಿಮ್ಮ ನಿಮ್ಮ ಹಣಾನೂ, ಪ್ರಾಣವನ್ನೂ ಕಳ್ಕೊಂಡ್ ಕಷ್ಟಕ್ಕೆ ಗುರಿ ಆಗಿಬುಡುತಿದ್ರೀ ತೇಳ್ತ್.

ಅಷ್ಟೊತ್ತಿಗೆ ಅಲ್ಲಿನ ದಫೇದಾರ ಈ ಮೂರು ಜನರಿಗೆ ಕಟ್ಟಿದ್ದ ವೇಲ್ ಫೀಸ್, ಸೀರೆ ಫೀಸ್‌ಗಳನ್ನ ಬಿಚ್ಚಿ ವಾಪಾಸ್ ಕೊಡ್ತ್. ಹಂಗೇ ಈ ಮೂರು ಜನರ ತಿಕದ ಮೇಲೆ ಒಂದೊಂದು ಒದ್ದ್ ಒಳಗೆ ಸೇರ್ಸಿ ಬೀಗ ಹಾಕಿದೊ.

ಅಷ್ಟೊತ್ತಿಗೆ ಆ ದಡೂತಿ ಹೆಂಗ್ಸ್ ತನ್ನ ಬೆರಳ್‌ಂದ ಮೊದಲು ಕಿತ್ತಾಡಿದ ಆ ಉಂಗುರನ ಬಿಚ್ಚಿಕಂಡ್ ರಾಜು ನಮ್ಮ ಆಪದ್ಬಾಂದವ ಇಂದ್ ನಮ್ಮೆಲ್ಲರ ಮಾನ ಕಾಪಾಡಿದಕ್ಕೆ ನನ್ನ ಕಿಂಚಿತ್ ನೆನಪಿನ ಕಾಣಿಕೆತ್ತೇಳಿ ಬಹಳ ಅಭಿಮಾನದಿಂದ ಅವನ ತಲೆ ಸವರಿ ಆ ಉಂಗುರನ ಅವನ ಜೋಬೊಳಗೆ ಹಾಕಿತ್. ಛೇ....ಛೇ... ಇದೆಲ್ಲಾ ನಂಗೆ ಬೇಡತಾ, ಕೊಸರಾಡಿತ್. ಇದರ ಕಂಡ್ ಇನ್‌ಸ್ಪೆಕ್ಟರ್ ತಮ್ಮಯ್ಯನವು ಇರಲಿ ರಾಜು ಅವು ನಿಮ್ಮ ಮೇಲಿನ ಅಭಿಮಾನಕೋಸ್ಕರ ಕೊಡುದರ ತಕಣಕ್ ತಾ ಸಮಾದಾನ ಹೇಳ್ದೊ. ಹೆಣ್ಣ್ ಜನ ಗಂಡ್ ಜನ ಒಬ್ಬೊಬ್ಬೊ ಬಹಳ ಅಭಿಮಾನಲಿ ರಾಜುಗೆ ಅಭಿನಂದಿಸಿಕಂಡ್ ಆ ಇನ್‌ಸ್ಪೆಕ್ಟರ್ ತಮ್ಮಯ್ಯನ ಎದುರುಗಡೇನೇ ತಮಿಗೆ ಖುಷಿ ಬಂದಷ್ಟ್ ಹಣನ, ಚಿನ್ನದ ಒಡವೆಗಳನ್ನ ಕೊಟ್ಟ್‌ಕಂಡ್ ಈ ರಾಜು ಮಂಜನ ಸಮಯ ಪ್ರಜ್ಞೆ, ಧೈರ್ಯನ ಮೆಚ್ಚಿಕಂಡ್ ನಮಗೋಸ್ಕರ ನಿನ್ನ

11ನೇ ಪುಟಕ್ಕೆ

# ನಮ್ಮ ಭಾಷೆ ಹಾಗೂ ಸಂಸ್ಕೃತಿ - ಸಂವಿಧಾನದ ರಕ್ಷಣೆ

ಎಲ್ಲರಿಗೂ ತಿಳಿದಿರುವಂತೆ ಅರೆಭಾಷೆ ಮಾತನಾಡುವ ಗೌಡಜನಾಂಗದವರಾದ ನಾವುಗಳು ಮೂಲಸ್ಥಳ ಕೊಡಗು ಹಾಗೂ ದಕ್ಷಿಣಕನ್ನಡ ಜಿಲ್ಲೆಯಾಗಿದೆ. ನಾವು ಇಲ್ಲಿನ ಮೂಲನಿವಾಸಿಗಳೋ ಅಥವ ಬೇರೆ ಊರಿನಿಂದ ಬಂದು ನೆಲೆಸಿದವರೋ ಎಂದು ಸ್ಥಿರ ಪಡಿಸುವ ಸಾಕ್ಷ್ಯಾದಾರ ಇರುವುದೆಂದು ನಾನು ನಂಬುವುದಿಲ್ಲ. ಏನೇ ಆಗಲಿ, ನಮ್ಮ ಭಾಷೆ ಹಾಗೂ ಸಂಸ್ಕೃತಿ ವಿಭಿನ್ನವಾಗಿರುವುದು ಒಂದು ಸತ್ಯಸಂಗತಿಯಾಗಿದೆ. ಇಂತಹ ವಿಭಿನ್ನವಾದ ಭಾಷೆ ಹಾಗೂ ಸಂಸ್ಕೃತಿಯನ್ನು ಜೀವಂತವಾಗಿಡಲು ನಮ್ಮ ಭಾರತೀಯ ಸಂವಿಧಾನವು (Constitution of India), 29 (1)ನೆಯ ನಿಬಂಧದ (Article 29 [1]) ಮೂಲಕ ಹಕ್ಕನ್ನು ಕೊಟ್ಟಿರುತ್ತದೆ. ಈ ನಿಬಂಧನೆಯು ಸಂವಿಧಾನದ ಮೂರನೆಯ ಭಾಗದಲ್ಲಿ (Part III) ಕಂಡುಬರುತ್ತದೆ ಹಾಗೂ ಇದು ಮೂಲಭೂತ ಹಕ್ಕುಗಳಲ್ಲಿ (Fundamental Rrights) ಒಂದಾಗಿದೆ. 29(1)ನೇ ನಿಬಂಧದ ಪ್ರಕಾರ ವಿಭಿನ್ನವಾದ ಭಾಷೆ, ಹಸ್ತಾಕ್ಷರ (Script), ಅಥವಾ ಸಂಸ್ಕೃತಿಯನ್ನು ಹೊಂದಿದ ಭಾರತದ ಯಾವುದೇ ಭಾಗದಲ್ಲಿ ವಾಸವಿರುವ ಪಂಗಡದ ಜನಾಂಗದವರಿಗೆ ಅದನ್ನು ರಕ್ಷಿಸಲು ಯಾ ಜೀವಂತವಾಗಿಡಲು ಹಕ್ಕನ್ನು ನೀಡುತ್ತದೆ. ಈ ಸಂದರ್ಭದಲ್ಲಿ ಗಮನವಿಡಬೇಕಾದ ಸಂಗತಿಯೆಂದರೆ, ಮೇಲೆ ಉಲ್ಲೇಖಿಸಿದ ಪಂಗಡವು ಧಾರ್ಮಿಕ, ಸಾಂಸ್ಕೃತಿಕ ಅಥವಾ ಭಾಷೆಗೆ ಸಂಬಂಧಿಸಿದಂತೆ ಅಲ್ಪಸಂಖ್ಯಾತರಾಗಿರಬೇಕೆಂದು 29(1)ನೇ ನಿಬಂಧ ಹೇಳುವುದಿಲ್ಲ. ಆದುದರಿಂದ ನಮ್ಮ ಅರೆಭಾಷೆ ಗೌಡ ಜನಾಂಗದವರನ್ನು ಸರಕಾರವು ಅಲ್ಪಸಂಖ್ಯಾತರೆಂದು ಘೋಷಿಸದಿದ್ದರೂ ಇದರ ಹಕ್ಕನ್ನು ನಾವು ಪಡೆಯಬಹುದು.

ಹಾಗೆಯೇ, ನಾವು ಮೂಲಭೂತ ಹಕ್ಕುಗಳನ್ನು (Fundamental Rights) ಇತರ ಹಕ್ಕುಗಳಿಂದ ವಿಂಗಡಿಸಬೇಕು. ಇತರ ಹಕ್ಕುಗಳು ಸಂವಿಧಾನದಲ್ಲಿ ಪ್ರಸ್ತಾಪಿಸಿದ (Except Pa.t III) ಇತರ ಹಕ್ಕುಗಳಿರಬಹುದು, ಅಥವ ಇತರ ಕಾಯಿದೆಗಳಲ್ಲಿ ಪ್ರಸ್ಥಾಪಿಸಿದ ಹಕ್ಕುಗಳಿರಬಹುದು, ಅಥವ ಕಾಮನ್ ಲಾ (Common Law) ಹಕ್ಕುಗಳಿರಬಹುದು. ಸರಕಾರದ ಎಲ್ಲಾ ಕಾಯಿದೆಗಳು, ಆರ್ಡರ್‌ಗಳು (orders), ನಿಯಮಗಳು (Rules), ತೀರ್ಪುಗಳು (decisions) ಮೂಲಭೂತ ಹಕ್ಕುಗಳಿಗೆ ಅನುಸಾರವಾಗಿರಬೇಕು. ಸರಕಾರವು (See Art 12 for definition) ನಮ್ಮ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದರೆ ನಾವು ನೇರವಾಗಿ ಹೈಕೋರ್ಟ್ (Art 226) ಅಥವಾ ಸುಪ್ರೀಮ್ ಕೋರ್ಟ್‌ಗೆ (Art 32) ಮೊರೆಹೋಗಿ ನಮ್ಮ ಹಕ್ಕುಗಳನ್ನು ಜಾರಿಮಾಡಿಕೊಳ್ಳಬಹುದು. ಆದರೆ ನಾವು ಇತರ ಹಕ್ಕುಗಳನ್ನು ಜಾರಿಮಾಡಬೇಕಾದರೆ, ಆಯಾ ಕಾಯಿದೆಯಲ್ಲಿ ಪ್ರಸ್ಥಾಪಿಸಿದ ಕೋರ್ಟ್‌ಗೆ ಹೋಗಿಯೇ ಮಾಡಬೇಕು. ಇದರಿಂದ ಬಹಳಷ್ಟು ಸಮಯವು ವ್ಯರ್ಥವಾಗುತ್ತದೆ. ಕಾರಣ, ಅಂತಹ ತೀರ್ಪುಗಳ ವಿರುದ್ಧ ಮೇಲಿನ ಕೋರ್ಟ್‌ಗೆ ಅಪೀಲು ಹೋಗಬಹುದು.

ಈ ಮೇಲೆ ಹೇಳಿದಂತೆ, ನಮ್ಮ ಮೂಲಭೂತ ಹಕ್ಕನ್ನು ನಾವು ಸುಪ್ರೀಂ ಕೋರ್ಟ್ ಅಥವ ಹೈಕೋರ್ಟ್‌ಗಳಲ್ಲಿ ಜಾರಿಗೊಳಿಸಲು ಅದರ ರಿಟ್ ಅಧಿಕಾರ ವ್ಯಾಪ್ತಿಗೆ (writ jurisdiction) ಮೊರೆಹೋಗಬಹುದು. ಉದಾ : ಜನಾಂಗದ ಮದುವೆಗಳಲ್ಲಿ ವಾದ್ಯವನ್ನು ಉಪಯೋಗಿಸಕೂಡದು ಅಥವಾ ಮಾಂಸದ ಭೋಜನ ಹಾಗೂ ಮದ್ಯಪಾನವನ್ನು ನೀಡಬಾರದು ಎಂದು ಜಿಲ್ಲಾಧಿಕಾರಿಗಳು ಆದೇಶ ನೀಡಿದರೆ, ಅಂತಹ ಆದೇಶದ ವಿರುದ್ಧ ನಾವು ಹೈಕೋರ್ಟ್ ಅಥವ ಸುಪ್ರೀಮ್ ಕೋರ್ಟ್‌ಗೆ ರಿಟ್ ಅರ್ಜಿಯನ್ನು ಸಲ್ಲಿಸಬಹುದು. ಏಕೆಂದರೆ ಅಂತಹ ಆದೇಶವು ನಮ್ಮ ಸಂಸ್ಕೃತಿಗೆ ವಿರುದ್ಧವಾಗುತ್ತದೆ.

ಈ ಉದಾಹರಣೆ ಕೇವಲ ಒಂದು ಕಲ್ಪನೆಯಷ್ಟೆ. ಇನ್ನು ರಿಟ್ ಎಂದರೆ ಏನು ಅಂತ ನೀವು ಊಹಿಸಬಹುದು. ಇದನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ಇದು ಒಂದು ಸಾಂಪ್ರದಾಯಿಕ ಬರವಣಿಗೆಯ ಆಜ್ಞೆಯಾಗಿದೆ. ಇದನ್ನು ನ್ಯಾಯಾಲಯವು ತಪ್ಪಿತಸ್ಥ ಸಾರ್ವಜನಿಕ ಅಧಿಕಾರಿ (Public Official) ಅಥವಾ ಕೆಳದರ್ಜೆಯ ಕೋರ್ಟ್‌ಗಳಿಗೆ (inferior courts) ಅಥವಾ ಟ್ರೈಬುನಲ್ಸ್ (Tribunals)ಗಳ ವಿರುದ್ಧ ನೀಡಬಹುದು. ಹಾಗೂ ಆ ರಿಟ್‌ನಲ್ಲಿ ಉಲ್ಲೇಖಿಸಿದ ವಿಷಯಕ್ಕೆ ಅನುಸಾರವಾಗಿ ನಡೆಯಲು ಆಜ್ಞೆ ಇರುತ್ತದೆ. ರಿಟ್‌ಗಳಲ್ಲಿ ಐದು ವಿಧಗಳಿವೆ. ಅವೆಂದರೆ, ಮ್ಯಾಂಡಮಸ್ (Mandamus), ಸಶಿಯೊರಾರಿ (Certiorari), ಪ್ರೋಹಿಭಿಷನ್ (Prohibition), ಕ್ವೊವಾರಂಟೋ (quo-warranto) ಹಾಗೂ ಹೇಭೀಯಸ್ ಕಾರ್ಪಸ್ (Haebus-Corpus). ಒಂದೊಂದು ರಿಟ್ ಒಂದೊಂದು ಕಾರ್ಯಕ್ಕೆ ಅನುಗುಣವಾಗಿರುತ್ತದೆ. ಇದನ್ನೆಲ್ಲ ವಿವರಿಸುವುದು ಸೂಕ್ತವಲ್ಲವೆಂದು ನಾನು ನಂಬುತ್ತೇನೆ. ಏಕೆಂದರೆ, ಇವುಗಳ ವಿವರಣೆಗೆ ಹಲವು ಪುಟಗಳೇ ಬೇಕಾಗುವುದು.

ಈಗ ಮುಖ್ಯವಾದ ವಿಷಯಕ್ಕೆ ಬರುತ್ತ, ನಮ್ಮ ಭಾಷೆ ಹಾಗೂ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದು ನಮ್ಮ ಕೈಯಲ್ಲಿದೆ. ಒಂದು ಭಾಷೆ ಅಥವ ಸಂಸ್ಕೃತಿ ಜನಾಂಗದವರಿಗೆ ಇಷ್ಟವಾದರೆ ಅಥವ ಸೊಗಸಾಗಿ ಕಂಡರೆ, ಅದು ಉಳಿಯುವದರಲ್ಲಿ ಎರಡು ಮಾತಿಲ್ಲ. ಇಲ್ಲವಾದರೆ ಅದು ಕಣ್ಮರೆಯಾಗುವುದು ಸಹಜವಾಗಿದೆ. ನಮಗೆಲ್ಲ ತಿಳಿದಿರುವಂತೆ ಜಗತ್ತಿನ ಶ್ರೇಷ್ಠವಾದ ಭಾಷೆಯಾದ ಸಂಸ್ಕೃತ ಭಾಷೆಯು ಈಗ ಕಣ್ಮರೆಯಾಗುತ್ತಿದೆ. ನನ್ನ ಪ್ರಕಾರ ಇದಕ್ಕೆ ಕಾರಣವೆಂದರೆ, ಹಿಂದಿನ ಕಾಲದಲ್ಲಿ ವಿದ್ಯೆಯು ಸಂಸ್ಕೃತ ಭಾಷೆಯಲ್ಲಿ ಇತ್ತು ಹಾಗೂ ಅಪೂರ್ವ ಗ್ರಂಥಗಳೂ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದವು. ಆದರೆ ಕೇವಲ ಕೆಲವರಿಗೆ ಅಂಥಹ ವಿದ್ಯೆ ಸೀಮಿತವಾಗಿತ್ತು. ಶೇಕಡ ತೊಂಬತ್ತರಷ್ಟು ಜನರು ಅವಿದ್ಯಾವಂತರಾಗಿದ್ದರು. ಇಂದಿನ ಭಾರತದ ಸ್ಥಿತಿಗೆ ಇದೂ ಒಂದು ಮುಖ್ಯವಾದ ಕಾರಣವಾಗಿದೆ. ಆದುದರಿಂದ ನಮ್ಮ ಸಂಸ್ಕೃತಿಯನ್ನು ಹಾಗೂ ಭಾಷೆಯನ್ನು ಚೆನ್ನಾಗಿ ತಿಳಿದವರು

ತಿಳಿಯದವರಿಗೆ ಅದನ್ನು ಸ್ವಾರಸ್ಯಕರವಾಗಿ ಹಾಗೂ ಸುಗಮವಾಗಿ ಮನವರಿಕೆ ಮಾಡಿಕೊಡಬೇಕು. ಜನರು ಸ್ವ ಇಚ್ಛೆಯಿಂದ ನಮ್ಮ ಭಾಷೆ ಹಾಗೂ ಸಂಸ್ಕೃತಿಯನ್ನು ಅನುಸರಿಸುವ ಸ್ಥಿತಿಯನ್ನು ಕಲ್ಪಿಸಬೇಕು. ಈ ನಿಟ್ಟಿನಲ್ಲಿ ನಾವೆಲ್ಲರೂ ಶ್ರೀ ಪಟ್ಟಡ ಪ್ರಭಾಕರನವರ, ಶ್ರೀ ಅಮ್ಮಾಜೀರ ಪೊನ್ನಪ್ಪನವರ, ಹಾಗೂ ನಮ್ಮ ಜನಾಂಗದವರನ್ನು ಒಟ್ಟುಗೂಡಿಸಿ ಕಾರ್ಯಕ್ರಮಗಳನ್ನು ನಡೆಸಿಕೊಡುವ ಎಲ್ಲಾರ ಕೊಡುಗೆಯನ್ನು ಶ್ಲಾಗಿಸಬೇಕೆ ಹೊರತು ನಾವು ಕರಿಡ ಸಣ್ಣ ತಪ್ಪುಗಳನ್ನು ಎತ್ತಿ ಹಿಡಿಯುವುದು ಸೂಕ್ತವಲ್ಲ.

ಅದೇ ರೀತಿ, ಧಾರ್ಮಿಕ ಸಹನೆ (Religious Tolerance) ನಮ್ಮ ಭಾರತ ದೇಶದ ಮುಖ್ಯವಾದ ಸಂಸ್ಕೃತಿಯಾಗಿದೆ. ಇಲ್ಲಿ ಅನೇಕ ಧರ್ಮದವರು ಇದ್ದರೂ ನಾವೆಲ್ಲರೂ ಸಹನೆಯಿಂದ ಬಾಳುತ್ತಿದ್ದೇವೆ. ಕೆಲವು ಘಟನೆಗಳನ್ನು ಬಿಟ್ಟರೆ ಒಟ್ಟಾಗಿ ಹೇಳುವುದಾದರೆ ಈ ಸಂಸ್ಕತಿಯು ಭಾರತ ದೇಶದವರ ಒಂದು ಪ್ರಾಮುಖ್ಯವಾದ ಸಂಸ್ಕೃತಿಯಾಗಿದೆ. ಇದನ್ನು ನಾವು ಪಾಲಿಸಬೇಕು. ಇತರ ಧರ್ಮದವರನ್ನು ಹಾಗೂ ಜಾತಿಯವರನ್ನು ನಾವು ಹಿಯಾಳಿಸಬಾರದು. ಏಕೆಂದರೆ, ಧರ್ಮ, ಜಾತಿ, ಕುಲಗಳೆಲ್ಲವೂ ಮನುಷ್ಯನ ಸೃಷ್ಟಿಮಾತ್ರ, ಆದರೆ, ಮಾನವ ಕುಲವು ದೇವರ ಸೃಷ್ಟಿ. ನಾವು ಮನುಷ್ಯನ ಸೃಷ್ಟಿಗಿಂತಲೂ ದೇವರ ಸೃಷ್ಟಿಯನ್ನು ಗೌರವಿಸಬೇಕು. ಹಾಗೆಯೆ ನಮಗೆ ನಮ್ಮ ಭಾಷೆಯ ಮೇಲೆ ಕೀಳರಿಮೆಯಾಗಲಿ, ನಕಾರಾತ್ಮಕ ಭಾವನೆಯಾಗಲಿ ಇರಕೂಡದು. ಅದೇ ರೀತಿ, ಸಂಪರ್ಕ ಭಾಷೆಗಳಾದ ಇಂಗ್ಲೀಷ್ ಹಾಗೂ ಕನ್ನಡವನ್ನು ನಾವೆಲ್ಲರೂ ಚೆನ್ನಾಗಿ ಕಲಿಯಬೇಕು. ಜೊತೆಗೆ ಇತರ ಭಾಷೆಗಳನ್ನು ಗೌರವಿಸಬೇಕು. ವಿವಿಧ ಭಾಷೆಗಳನ್ನು ಕಲಿತರೆ ಒಳ್ಳೆಯದೇ ಹೊರತು ಕೆಡಕಾಗುವುದಿಲ್ಲ. ಕೊನೆಯದಾಗಿ ಹೇಳುವುದಾದರೆ, ನಮ್ಮ ಸಂವಿಧಾನದ ಪೀಠಿಕೆಯಲ್ಲಿ (Preamble) ಉಲ್ಲೇಖಿಸಿದ ತತ್ವಗಳಾದ ಸಹೋದರ ಭಾವನೆ (Fraternity), ಏಕೀಭಾವ (unity) ಮತ್ತು ರಾಷ್ಟ್ರೀಯ ಸಮಗ್ರತೆ, (Integrity of the nation) ಗಳನ್ನು ನಾವೆಲ್ಲರೂ ಪಾಲಿಸಬೇಕು.

**— ಪೂಳಕಂಡ ಪ್ರದೀಪ್ ಮುತ್ತಪ್ಪ,**
**ಮೈಸೂರು.**

---

# ವಿದ್ಯೆ

ವಿದ್ಯೆ ಎಂದರೆ ಏನೆಂಬುದೆನ್ನೇ ಇಂದು ಹೆಚ್ಚಿನ ಜನರು ತಿಳಿದುಕೊಂಡಿಲ್ಲ. ವಿದ್ಯೆ ಎಂದರೆ ಓದು ಎಂಬರ್ಥ ಸರಿಯಾಗಿದ್ದರೂ ಕೂಡ ಕೇವಲ ಓದು ಬರಹಗಳೇ ವಿದ್ಯೆಯಲ್ಲ ಎಂಬುದ ನನ್ನ ಅಭಿಪ್ರಾಯ.

ಇಂದು ಮಾನವನು ವೈಜ್ಞಾನಿಕ ಜ್ಞಾನವನ್ನು ಅಸೀಮಿತವಾಗಿ ಸಂಪಾದಿಸಿದ್ದಾನೆ.... ಸಂಪಾದಿಸುತ್ತಿದ್ದಾನೆ. ಪರಿಣಾಮವಾಗಿ ಪ್ರಪಂಚದ ಆಕರ್ಷಣೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಹಾಗಾದರೆ ಇಂದು ಮಾನವನು ಹೇಗಿರಬೇಕೆಂದು ನಾವು ಒಂದು ಕ್ಷಣ ಯೋಚಿಸೋಣವೇ? ಇಂದು ಮಾನವನು ಕೇವಲ ಮಾನವನಾದರೆ ಮಾತ್ರ ಸಾಲದು, ಆತನು ಆದರ್ಶವಾಗಿ ಬಾಳಬೇಕು, ಅವನ ಹೃದಯಾಂತರಾಳದಲ್ಲಿ ಕರುಣೆ, ಅನುಕಂಪಗಳಂಥಹ ಉತ್ತಮ ಸಂಸ್ಕಾರಗಳು ಮೂಡಿ ಬರಬೇಕು.

ಕ್ಷಮಿಸಿ !. ವಿದ್ಯೆಯ ಬಗ್ಗೆ ಮಾತಾಡುತ್ತಾ ಮಾನವನು ಹೇಗಿರಬೇಕು ಎಂಬುದನ್ನು ಬರೆದಿದ್ದೇನೆ ಎಂದು ಆಶ್ಚರ್ಯ ಪಡಬೇಡಿ. ವಿದ್ಯೆಯ ಜೊತೆಗೆ ಒಳ್ಳೆಯ ಗುಣ, ಶ್ರದ್ಧೆ ಯಿಂದ ಕೂಡಿದ ಮನಸ್ಸೂ ಬೇಕು, "ಮನಸ್ಸಿದ್ದರೆ ಮಾರ್ಗ" ಎಂಬಂತೆ. "Do whatever you do in a principle way and success will be yours" ಈ ನುಡಿಯನ್ನು ನೀವು ಕೇಳಿರುವಿರಾ? ಇದರ ಅರ್ಥ "ಯಾವುದೇ ಕಾರ್ಯವನ್ನು ಕ್ರಮಬದ್ಧವಾಗಿ ಮಾಡಿದಲ್ಲಿ, ಖಂಡಿತವಾಗಿಯೂ ಜಯ ನಿನ್ನದಾಗುತ್ತದೆ". ಎಷ್ಟರ ಮಟ್ಟಿಗೆ ಇದು ಸತ್ಯ ಎಂದರೆ ಸಾಧಿಸುವ ಛಲ ನಮ್ಮಲ್ಲಿರಬೇಕು. ವಿದ್ಯೆಯನ್ನು ಪಡೆಯುವುದು ಬಲು ಸುಲಭ, ಆದರೆ ಅದನ್ನು ಯಾವ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕೆಂಬುದನ್ನು ಬಹಳಷ್ಟು ಜನ ತಿಳಿದು ಕೊಂಡಿಲ್ಲ.

ವಿದ್ಯಾವಂತನಿಗೆ ಹಲವಾರು ಕ್ಷೇತ್ರಗಳಲ್ಲಿ ಮುಂದೆ ಬರುವ ಸಾಧ್ಯತೆಯಿದೆ. ಆದರೆ ಈಗಿನ ಪೋಷಕರಿಗೆ ತಮ್ಮ ಮಕ್ಕಳು ಡಾಕ್ಟರ್ ಅಥವಾ ಇಂಜಿನಿಯರ್ ಆಗಬೇಕೆಂಬ ಹಂಬಲ. ಕಂಪ್ಯೂಟರ್ ಯುಗದಲ್ಲಿರುವ ನಾವು ಎಷ್ಟು ಮುಂದುವರಿದಿದ್ದೇವೆ ಎಂಬುದು ನಿಮಗೆ ಗೊತ್ತೇ? ನಾನಾ ವಿಧದ ಕೋರ್ಸ್‌ಗಳು ಉದಾ : ಐ.ಎ.ಎಸ್., ಐ.ಪಿ.ಎಸ್., ಕೆ.ಎ.ಎಸ್., ಎಂ.ಬಿ.ಎ. ಮುಂತಾದವುಗಳು. ಅದಕ್ಕೆ ಸರಿಯಾಗಿ ಈಗಿನ ಕಾಲೇಜುಗಳಲ್ಲಿ ಕೇಳಿಬರುತ್ತಿರುವ ಲಂಚ, ಜೊತೆಗೆ ಡೊನೇಷನ್.... ಅಬ್ಬಬ್ಬಾ! ಬೇಡವೇ ಬೇಡ. ಎಲ್ಲಿ ನೋಡಿದರೂ 1ಲಕ್ಷ, 2ಲಕ್ಷ... ಹೀಗಾದರೆ ನಮ್ಮಂಥವರ ಗತಿಯೇನು? ವಿದ್ಯೆಯೆಂಬುದು ಮಾರುಕಟ್ಟೆಯಲ್ಲಿ ದೊರೆಯುವ ವಸ್ತುವಿನಂತಾಗಿದೆ. ನಿಜವಾದ ಆಸಕ್ತಿ ಹಾಗೂ ಅರ್ಹತೆಯುಳ್ಳ ವ್ಯಕ್ತಿಗೆ ವಿದ್ಯಾಭ್ಯಾಸವನ್ನು ಮುಂದುವರಿಸಲು ಅಸಾಧ್ಯವಾಗಿದೆ. ಈ ಭೌತಿಕ ಪ್ರಪಂಚದ ಜ್ಞಾನವನ್ನು ಮಾತ್ರ ಹೆಚ್ಚಿಸಿ ಉದರ ಪೋಷಣೆಗೆ ಸಹಾಯ ಮಾಡುವುದು ವಿದ್ಯೆಯೆನಿಸಲಾರದು.

ಇಂದು ಹೆಚ್ಚಿನವರಿಗೆ ಜೀವನಕ್ಕೆ ಯಾವುದು ಮುಖ್ಯ ಯಾವುದು ಆಧಾರ ಎಂಬುದೇ ತಿಳಿಯದು. ಪ್ರೇಮದಿಂದ ಕೂಡಿದ ದೇಶಭಕ್ತಿ, ತ್ಯಾಗದಿಂದ ಕೂಡಿದ ದೈವಭಕ್ತಿ, ಆತ್ಮ ವಿಶ್ವಾಸಗಳು ಜನ ಜೀವನವನ್ನು ಹಸನಾಗಿಸಲು ಅತ್ಯವಶ್ಯಕ. ವಿದ್ಯಾಭ್ಯಾಸದ ಜೊತೆಗೆ ಹೃದಯ ವೈಶಾಲ್ಯತೆಯೂ, ಜಾಣ್ಮೆಯೂ ಹೆಚ್ಚಬೇಕು. ಹಿರಿಯರು ಹೇಳಿರುವ ಹಾಗೆ "Education is not only the key road to success". ವಿದ್ಯೆಯು ನಮಗಿಂದು ವಿನಯವನ್ನು ತಂದು ಕೊಡುತ್ತಿಲ್ಲ. ವಿದ್ಯಾವಂತರಿಗಿಂತ ಅವಿದ್ಯಾವಂತರೇ ಮೇಲು. ಅವರಲ್ಲಿ ಒಂದು ರೀತಿಯ ವಿನಯ, ನಿಷ್ಠೆ, ಪ್ರಾಮಾಣಿಕತೆಗಳು ಎದ್ದು ಕಾಣುತ್ತವೆ.

**— ಮಳ್ಳಂದೀರ ಎಲ್. ಸ್ಮಿತ, ಮರಗೋಡು.**

---

**ಮುಂದಿನಿಂದ ಸೊಳ್ಳೆ ಹೋಗಬಾರದು, ಹಿಂದಿನಿಂದ ಆನೆ ಹೋಗಬಹುದು**

# ಮಾರ್ಗದರ್ಶನ

ನನಗೆ ಬಾಲ್ಯದಲ್ಲಿ ಕಲೆಯ ಬಗ್ಗೆ ಆಸಕ್ತಿ ಇತ್ತು. ಆದರೆ ಯಾರಿಂದಲೂ ಸರಿಯಾದ ಮಾರ್ಗದರ್ಶನ ದೊರೆಯಲಿಲ್ಲ. ನಾನು ನನ್ನಿಷ್ಟಕ್ಕೆ ಗೀಚುವಿಕೆಯ ಹಂತದಿಂದ ಬಣ್ಣ ಹಚ್ಚುವಿಕೆಯ ವರೆಗೆ ತೆವಳುತ್ತಾ ಬಂದೆ. ಅಂತಹ ಸಮಯದಲ್ಲಿ ಸೂಕ್ತವಾದ ಸಲಹೆ ಮಾರ್ಗದರ್ಶನವಿಲ್ಲದೆ ಪರಿಣತಿಯನ್ನು ಪಡೆಯಬೇಕಾದ ಕೌಶಲ್ಯ ಚಿಗುರಿನಲ್ಲಿಯೇ ಪೋಷಣೆ ಇಲ್ಲದೆ ಗೊತ್ತು ಗುರಿಯಿಲ್ಲದ ಪಥದಲ್ಲಿ ಸಾಗಿತು. ಬಾಲ್ಯಾವಸ್ಥೆಯಲ್ಲಿಯೇ ಇದ್ದ ಈ ಕಲೆಯು ತನ್ನಿಷ್ಟಕ್ಕೆ ಮುಂದುವರಿಯುತ್ತಿತ್ತು. ನನ್ನದೆ ಆದ ಚಿತ್ರ, ಮಾದರಿ ತಯಾರಿಗೆ, ಸಂಗ್ರಹಣೆಯಲ್ಲಿ ಆನಂದಿಸುತ್ತಾ P.U.C.ಯವರೆಗೆ ಬಂದೆ. ಅಲ್ಲಿಯವರೆಗೆ ತಂದೆ ತಾಯಿಯಿಂದಾಗಲಿ, ಬಂಧುಗಳಿಂದಾಗಲಿ, ಗುರುಗಳಿಂದಾಗಲಿ ಬೇಕಾದ ಮಾರ್ಗದರ್ಶನ ದೊರೆಯಲಿಲ್ಲ. P.U.C.ಯಲ್ಲಿ ಮತ್ತು B.A. ತರಗತಿಯಲ್ಲಿ ಕೆಲವು ಶಿಕ್ಷಕರಿಂದ, ಸ್ನೇಹಿತರಿಂದ ಸ್ವಲ್ಪ ಸಲಹೆ ಮಾರ್ಗದರ್ಶನ ದೊರೆಯಿತು ನಂತರ T.C.H.ನಲ್ಲಿ ಕಲಾ ಶಿಕ್ಷಕರಾದ ಚಂದ್ರಶೇಖರ ಮಲ್ಲೋರ ಹಟ್ಟಿ ಅವರಿಂದ ಕಲೆಯ ಕೆಲವು ತಂತ್ರವನ್ನು ಕಲಿತುಕೊಂಡು ಸುಧಾರಿಸಿದೆ. ನನ್ನ ಜೀವನದ ಕೌಶಲ್ಯದ ಮಾರ್ಗದರ್ಶಕರಲ್ಲಿ ಅವರೊಬ್ಬರಾದರು. ಈಗ ಶಿಕ್ಷಣ ಕ್ಷೇತ್ರದಲ್ಲಿ, ಶಿಕ್ಷಕರಲ್ಲಿಯ ಪ್ರೋತ್ಸಾಹ, ಮೆಚ್ಚುಗೆಯಿಂದ ಕಲೆಯ ಬಗ್ಗೆ ನೆಮ್ಮದಿಯನ್ನು ತಂದು ಕೊಂಡಿದ್ದೇನೆ.

ಅದೇ ರೀತಿ ನನಗೆ ವೃತ್ತಿ ಜೀವನದಲ್ಲಿ ಒಬ್ಬರು ಮಾರ್ಗ ದರ್ಶಕರು ಸಿಕ್ಕಿದ್ದಾರೆ ಅವರೇ ದೇವಜನ ಗೋಪಾಲ. ಅವರು ನನಗೆ ಪ್ರೌಢಶಾಲಾ ಶಿಕ್ಷಕರಾಗಿದ್ದು ಈಗ ನಿವೃತ್ತರಾಗಿರುತ್ತಾರೆ. ನನ್ನನ್ನು ಕಂಡಾಗಲೆಲ್ಲಾ ಮಾತನಾಡಿಸಿ ವೃತ್ತಿ ಜೀವನದಲ್ಲಿ ಯಾವ ರೀತಿ ಬದಲಾವಣೆಗಳನ್ನು ಮಾಡಿಕೊಂಡು ಮುಂದುವರಿಯ ಬಹುದು. ಅಂದರೆ ಸೇವೆಯೊಡನೆ ಓದು ಹೆಚ್ಚಿನ ಜ್ಞಾನ ಸಂಪಾದನೆಯ ಮಾರ್ಗ ಮೊದಲಾದ ಮಾರ್ಗದರ್ಶನವನ್ನು ಸಂವಾದ ನಡೆಸಿದಾಗಲೆಲ್ಲಾ ನೀಡುತ್ತಿರುತ್ತಾರೆ.

ಜೀವನದಲ್ಲಿ ಬಹುಪಾಲು ಜನ ನೀಡುವ ಮಾರ್ಗ ದರ್ಶನಗಳು ಬೇರೆ, ಸಂಬಳ ಎಷ್ಟು ಬರುತ್ತದೆ ಒಂದು ಬೈಕ್ ತೆಗೆ, ಟಿ.ವಿ. ಖರೀದಿಸಿ, ಹೀಗೆ ಐಶಾರಾಮದತ್ತ ಮಾರ್ಗದರ್ಶನ ಮಾಡುತ್ತಾರೆ. ಜೀವನದ ಪ್ರಮುಖ ಗುರಿಯಾದ ಸಮಾಜಕ್ಕೆ ನೀಡಬಹುದಾದ ಶಾಶ್ವತ ಉಳಿವಿನ ಮಾರ್ಗದರ್ಶನ ಮಾಡುವವರ ಅಭಾವವಿದೆ.

ವ್ಯಕ್ತಿಯು ತನಗೆ ತಾನೇ ಸಹಾಯ ಮಾಡಿಕೊಳ್ಳಲು ಒದಗಿಸುವ ವ್ಯವಸ್ಥಿತ ಸಹಾಯಕವೆ ಮಾರ್ಗದರ್ಶನವಾಗಿರುವುದು. ವ್ಯಕ್ತಿಯು ತನ್ನ ಸಾಮರ್ಥ್ಯಕ್ಕೆ ಅನುಗುಣವಾದ ಬದುಕಿನ ಗುರಿಯನ್ನು ಆಯ್ಕೆ ಮಾಡಿ ಅದನ್ನು ಸಾಧಿಸಲು ಸರಿಯಾದ ಕಾರ್ಯವಿಧಾನ ರೂಪಿಸಿಕೊಳ್ಳಲು ನೀಡುವ ವ್ಯವಸ್ಥಿತ ಸಹಾಯಕವೇ ಮಾರ್ಗದರ್ಶನ. ವ್ಯಕ್ತಿಯು ತನ್ನ ಗುರಿಯನ್ನು ತಾನೇ ನಿರ್ಧರಿಸಲು ಕಾರ್ಯವಿಧಾನವನ್ನು ತಾನೇ ರೂಪಿಸಬೇಕು. ಅದಕ್ಕೆ ಯುಕ್ತ ಸಹಾಯ ಒದಗಿಸುವುದು, ಮಾರ್ಗದರ್ಶನ ಸಲಹೆ ಮಾರ್ಗದರ್ಶನದ ವಿಶೇಷ ರೂಪ.

ನನಗೆ ಸಾಂಸ್ಕೃತಿಕ ವಿಷಯದಲ್ಲಿ ಆಸಕ್ತಿ. ಇದಕ್ಕೆ ನಿರೂಪಣೆ, ನಿರ್ದೇಶನ ನಿರ್ಮಾಣದ ಮಾರ್ಗದರ್ಶನ ಅವಶ್ಯಕ. ಇದಕ್ಕೆ ನನ್ನ ಜೀವನದ ಮಾರ್ಗದರ್ಶಕರೆಂದರೆ ನನ್ನ ಬಂಧುವಾದ ಕುದುಕುಳಿ ಭರತ ಮತ್ತು ಇಂದಿರ. ಅದೇ ರೀತಿ ಕೊಡಗು ಸಂಗಾತಿಯ ಮೂಲಕ ಪರಿಚಿತರಾದ ಬೈತಡ್ಕ ಜಾನಕಿ ಬೆಳ್ಯಪ್ಪ, ಹಾಗೆಯೆ ನನ್ನ ಕಿರು ಲೇಖನ, ಕವನಗಳಿಗೆ ಉತ್ತೇಜನ ಮತ್ತು ಮಾರ್ಗದರ್ಶನವನ್ನು ನೀಡುತ್ತಿರುವವರು ಕೊಡಗು ಸಂಗಾತಿಯ ಸಂಪಾದಕರು.

ಮಾರ್ಗದರ್ಶನವು ಯೋಜನೆಗೆ ಒಳಗಾದ ಸಹಾಯ. ಇದು ವ್ಯಕ್ತಿಯೊಬ್ಬನ ಸಮಸ್ಯೆಯನ್ನು ನಿವಾರಣೆ ಮಾಡುವುದು, ಪ್ರಜ್ಞಾವಸ್ಥೆಯಲ್ಲಿ ಕಾರ್ಯ ನಿರ್ವಹಿಸುವುದು. ಬಾಲ್ಯದಲ್ಲಿ ಮಗು ಯಾವ ಶಾಲೆಯಲ್ಲಿ ಓದಬೇಕು, ಮಗುವಿಗೆ ಯಾವ ಸೌಲಭ್ಯವನ್ನು ಒದಗಿಸಬೇಕು, ಮಗುವಿನಲ್ಲಿ ಯಾವ ಕೌಶಲ್ಯವಿದೆ ಎಂಬುದನ್ನು ಗುರುತಿಸುವವರು ತಂದೆ ತಾಯಿ, ಗುರುಗಳು. ಇವರು ಇದನ್ನು ಪರಿಗಣಿಸಿ ಸರಿಯಾದ ಮಾರ್ಗದರ್ಶನ ಮಾಡಿದರೆ ಮಗು ತನ್ನ ಗುರಿಯನ್ನು ಸಾಧಿಸುವುದು. ಒಬ್ಬ ಚಿತ್ರಕಲಾವಿದನಾಗುವ ಎಲ್ಲಾ ಸಾಮರ್ಥ್ಯ, ಕೌಶಲ್ಯವನ್ನು ಹೊಂದಿದ್ದರೆ ಅವನನ್ನು ಡಾಕ್ಟರ್ ಮಾಡಿಸುವ ಪ್ರಯತ್ನ ವಿಫಲವಾಗುವುದು.

ಮಾರ್ಗದರ್ಶನವು ನಿರಂತರವಾಗಿ ದೊರೆಯುತ್ತಿರಬೇಕು. ಪ್ರತಿಯೊಂದು ಕ್ಷೇತ್ರದಲ್ಲೂ ಅಂದರೆ ಶೈಕ್ಷಣಿಕ ಮಾರ್ಗದರ್ಶನ, ವೃತ್ತಿ ಮಾರ್ಗದರ್ಶನ, ಸಾಮಾಜಿಕ ಮಾರ್ಗದರ್ಶನ, ಆರೋಗ್ಯ ಮಾರ್ಗದರ್ಶನ, ಧಾರ್ಮಿಕ ಮಾರ್ಗದರ್ಶನ, ಶಾಲಾ ಮಾರ್ಗ ದರ್ಶನ, ನಾಯಕತ್ವ ಮಾರ್ಗದರ್ಶನ, ವಿರಾಮ ವೇಳೆಯ ಮಾರ್ಗದರ್ಶನ, ವೈವಾಹಿಕ ಮಾರ್ಗದರ್ಶನ, ವೃದ್ಧರ ಮಾರ್ಗ ದರ್ಶನ. ಮಾರ್ಗದರ್ಶನವು ವ್ಯಕ್ತಿಯೊಬ್ಬನ ಸರ್ವತೋಮುಖ ಬೆಳವಣಿಗೆಗೆ ಮತ್ತು ನಿರಂತರವಾದ ಪ್ರಕ್ರಿಯೆಗಳಿಗೆ ನೆರವಾಗುವಂತದ್ದು ಎಂದು ಅರ್ಥೈಸಲಾಗಿದೆ. ಎಲ್ಲಾ ಮಾರ್ಗ ದರ್ಶನ ಶಿಕ್ಷಣ ಆದರೆ ಎಲ್ಲಾ ಶಿಕ್ಷಣವು ಮಾರ್ಗದರ್ಶನವಲ್ಲ. "All guidance is education but all education is not guidance"

— **ತೆಕ್ಕಡೆ ಬಿ. ಕುಮಾರ, ಮುತ್ತಾರ್ಮುಡಿ.**

---

## ನಗೆಹನಿ

ಡಾಕ್ಟರ್ : ನೋಡಮ್ಮ ಎಣ್ಣೆ, ತಿಂಡಿ ಬುಟ್ಟ್ ಬ್ಯಾರೆ ಎಂತಾರ್ ತಿನ್ನಿ"

ಕಾಂತಿ : "ರೊಟ್ಟಿ ತಿನ್ನಕಾ"

ಡಾಕ್ಟರ್ : "ತೊಂದರೆ ಇಲ್ಲೆ ತಿನ್ನಿ"

ಕಾಂತಿ : "ದೋಸೆ ತಿನ್ನಕಾ"

ಡಾಕ್ಟರ್ : "ಪರ್ವಾಗಿಲ್ಲೆ ತಿನ್ನಿ"

ಕಾಂತಿ : "ಕಡ್ಂಬಿಟ್ಟ್ ತಿನ್ನಕಾ"

ಡಾಕ್ಟರ್ : "ನನ್ನ ತಲೆ ಬುಟ್ಟ್ ಬ್ಯಾರೆ ಏನ್ ಬೇಕಾರ್ ತಿನ್ನಿ"

— *ಯಾಲದಾಳು ಈ. ಚಂದ್ರಕಲಾ, ಮಡಿಕೇರಿ*

---

**ಕಳ್ಳನ ಸಂಗವಾದರೂ ಹೌದು, ಕಳ್ಳು ಕುಡಿಯುವವನ ಸಂಗವಲ್ಲ**

# ಬ್ಯಾಂಕ್ ಆಫ್ ಬರೋಡದಲ್ಲಿ ಕಬಡ್ಡಿ ಕ್ರೀಡಾಪಟುಗಳಿಗೆ ಅವಕಾಶ

ಪ್ರತಿಭಾವಂತ ಯುವ ಕಬಡ್ಡಿ ಆಟಗಾರರಿಗೆ ಬ್ಯಾಂಕ್ ಆಫ್ ಬರೋಡದಲ್ಲಿ ಕ್ಲೆರಿಕಲ್ / ಸಬಾರ್ಡಿನೇಟ್ ಕೇಡರ್‌ನಲ್ಲಿ ಉದ್ಯೋಗ ಪಡೆಯಲು ಅವಕಾಶಗಳಿವೆ. ಅರ್ಹತೆಯ ವಿವರಗಳು ಈ ಕೆಳಗಿನಂತಿವೆ.

**ಕ್ಲೆರಿಕಲ್ ಕೇಡರ್ :**

*ವಯೋಮಿತಿ :* 18-28 ವರ್ಷಗಳು (1-7-2000ಕ್ಕೆ)

*ವಿದ್ಯಾರ್ಹತೆ:* ಕನಿಷ್ಠ SSLC ಪಾಸಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಪಡೆದಿರಬೇಕು.

*ಕ್ರೀಡಾ ಅರ್ಹತೆ :* ರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿರಬೇಕು ಅಥವಾ ರಾಜ್ಯ ಕ್ರೀಡಾ ಕೂಟಗಳಲ್ಲಿ ಜಿಲ್ಲೆಯನ್ನು ಪ್ರತಿನಿಧಿಸಿ ಪ್ರತಿಭೆ ಮೆರೆದಿರಬೇಕು.

**ಸಬಾರ್ಡಿನೇಟ್ ಕೇಡರ್ :**

*ವಯೋಮಿತಿ :* 18-26ವರ್ಷಗಳು (1-7-2000ಕ್ಕೆ)

*ವಿದ್ಯಾರ್ಹತೆ:* ಓದಲು, ಬರೆಯಲು ತಿಳಿದಿರಬೇಕು. 5ನೇ ತರಗತಿ ಪಾಸಾಗಿರಬೇಕು. 8ನೇ ತರಗತಿಗಿಂತ ಹೆಚ್ಚು ಕಲಿತಿರಬಾರದು.

*ಕ್ರೀಡಾ ಅರ್ಹತೆ* : ರಾಜ್ಯಮಟ್ಟದ ಕ್ರೀಡಾ ಕೂಟಗಳಲ್ಲಿ ಜಿಲ್ಲೆಯನ್ನು ಪ್ರತಿನಿಧಿಸಿರಬೇಕು ಅಥವಾ ಅಖಿಲ ಭಾರತ ಸ್ಕೂಲ್ ಇವೆಂಟ್‌ಗಳಲ್ಲಿ ಭಾಗವಹಿಸಿರಬೇಕು.

[ಎರಡೂ ಕೇಡರ್‌ಗಳಲ್ಲಿ ಗರಿಷ್ಠ ವಯೋಮಿತಿಯಲ್ಲಿ SC/ST/OBC ಮತ್ತು ExSM ಅಭ್ಯರ್ಥಿಗಳಿಗೆ ಕಾನೂನಿನಂತೆ ಸಡಿಲಿಕೆಯನ್ನು ನೀಡಲಾಗಿದೆ.]

ಆಯ್ಕೆಗೆ ಲಿಖಿತ ಪರೀಕ್ಷೆ ಮತ್ತು ಸಂದರ್ಶನ ಇರುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ಆರು ತಿಂಗಳ ಅವಧಿಗೆ ಪ್ರೊಬೇಶನ್ ಇರುವುದು.

ಆಸಕ್ತ ಅಭ್ಯರ್ಥಿಗಳು ಕೆಳಗೆ ನೀಡಲಾದ ಮಾದರಿಯಂತೆ ಅರ್ಜಿಯನ್ನು ತಯಾರಿಸಿ ಪ್ರಾಯ, ವಿದ್ಯಾರ್ಹತೆ, ಜಾತಿ, ಕ್ರೀಡಾ ನಿರ್ವಹಣೆ ಇತ್ಯಾದಿ ಸರ್ಟಿಫಿಕೇಟ್‌ಗಳ ಪ್ರತಿಗಳ ಸಹಿತ ಕೆಳಗಿನ ವಿಳಾಸಕ್ಕೆ 30-11-2000ರ ಮೊದಲು ತಲುಪುವಂತೆ ಸಲ್ಲಿಸಬೇಕು.

ವಿಳಾಸ :

**Assistant General Manager (SA : R&P & HRD)**
**Bank of Baroda, Head Office Suraj Plaza - III,**
**4th Floor Sayajigunj, Maganwadi Baroda-390 005**

ಅರ್ಜಿಯಲ್ಲಿ ಸೂಚಿಸಿದ ಸ್ಥಳದಲ್ಲಿ ಅಭ್ಯರ್ಥಿಯ ಫೋಟೋ (ಪಾಸ್‌ಪೋರ್ಟ್ ಅಳತೆಯ) ಅಂಟಿಸಿ ಸಹಿ ಮಾಡಬೇಕು. ಅರ್ಜಿಯ ಕವರ್‌ನ ಮೇಲೆ "Recruiting of Outstanding Sports Person - 2000" ಎಂದು ಬರೆಯಬೇಕು.

---

## APPLICATION FORMAT

Application for Recruitment of Outstanding Sports Persons in _________ cadre :

(1) Name (2) Address for correspondence (3) Nationality (4) Religion (5) Category - SC*/ST*/OBC*Ex-servicemen*/General (6) Age (Date of Birth)* (7) Education Qualification*

(8) Details regarding achievement in Sports
- (i) Field
- (ii) Level of representaions viz District / State / National etc
- (iii) Recipient of any National / State award*

(9) Past experience, if any (details thereof)

**DECLARATION**

(i) I hereby declare that all statement made in this application are true, complete and correct to the best of my knowledge and belief. I understand and agree that in case any of the particulars furnished by me are found to be false or incorrect at any stage, my application / candidature is liable to be summarily rejected and if already appointed, my services are liable to be terminated.

(ii) I agree to serve in any office / branch of the bank upon appointement.

Place :

Date : **APPLICANTS SIGNATURE**

*- Copies of certificates should be attached.

---

ಸಾವಿರ ಸುಳ್ಳು ಹೇಳಿಯಾದರೂ ಒಂದು ಮದುವೆ ಮಾಡಿದರೆ ಪುಣ್ಯ ಉಂಟು

# ಪಿಯುಸಿ ಆಗಿದ್ದು HMV ಲೈಸೆನ್ಸ್ ಹೊಂದಿರುವವರಿಗೆ ಏರ್‌ಪೋರ್ಟ್ಸ್ ಅಥಾರಿಟಿಯಲ್ಲಿ ಫಯರ್ ಆಪರೇಟರ್ ಹುದ್ದೆಗಳು

ಕೇಂದ್ರ ಸರಕಾರದ ಸಂಸ್ಥೆಯಾದ ಏರ್‌ಪೋರ್ಟ್ಸ್ ಅಥಾರಿಟಿ ಆಫ್ ಇಂಡಿಯಾದಲ್ಲಿ ಫಯರ್ ಆಪರೇಟರ್‌ಗಳ 17 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಒಟ್ಟು ಹುದ್ದೆಗಳಲ್ಲಿ 11-OBCಯವರಿಗೆ ಮೀಸಲಾಗಿದ್ದರೆ ಉಳಿದ 6-STಯವರಿಗೆ ಮೀಸಲಾಗಿದೆ.

ಸಯನ್ಸ್ ವಿಭಾಗದಲ್ಲಿ ಪಿಯುಸಿ ಮಾಡಿದ ಘನವಾಹನ ಚಲಾವಣೆಯ ಲೈಸೆನ್ಸ್ ಹೊಂದಿರುವ ಯಾವುದೇ ರೀತಿಯ ಅಂಗವೈಕಲ್ಯ ಹೊಂದಿರದ 27 ವರ್ಷ ದಾಟದ ಅಭ್ಯರ್ಥಿಗಳು ಅರ್ಜಿ ಹಾಕಬಹುದು.

ಫಯರ್ ಆಪರೇಶನ್ ಕ್ಷೇತ್ರದಲ್ಲಿ ಹೊಂದಿರುವ ಕೆಲಸದ ಅನುಭವ ಅಪೇಕ್ಷಣೀಯ ವಿದ್ಯಾರ್ಹತೆಯಾಗಿದೆ. ಹಾಗೆಯೇ ಅಭ್ಯರ್ಥಿಗಳು ಈ ಕೆಳಗಿನ ದೈಹಿಕ ಅರ್ಹತೆಗಳನ್ನು ಹೊಂದಿರಬೇಕು.

ಕನಿಷ್ಠ ಎತ್ತರ 168 ಸೆಂ.ಮೀ., ಕನಿಷ್ಠ ತೂಕ 56 ಕೆ. ಜಿ.

ಕನಿಷ್ಠ ಎದೆ ಅಳತೆ 81 ಸೆಂ.ಮೀ. (5 ಸೆಂ.ಮೀ. ಹಿಗ್ಗಿಸಲು ಸಾಧ್ಯವಾಗಬೇಕು.) ಅಭ್ಯರ್ಥಿಗಳು ಯಾವುದೇ ತರದ ದೃಷ್ಟಿ ದೋಷವನ್ನಾಗಲಿ ಹೊಂದಿರಬಾರದು.

ಅರ್ಹ ಅಭ್ಯರ್ಥಿಗಳನ್ನು ನೇಮಕ ಮಾಡಲು ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆ ಶಾರೀರಿಕ ಅರ್ಹತಾ ಪರೀಕ್ಷೆ, ಡ್ರೈವಿಂಗ್ ಪರೀಕ್ಷೆ ಇತ್ಯಾದಿಗಳನ್ನು ನಡೆಸಲಾಗುವುದು.

ಕೆಳಗಿನ ಮಾದರಿಯಂತೆ ಅಭ್ಯರ್ಥಿಗಳು ಅರ್ಜಿಯನ್ನು ತಯಾರಿಸಬೇಕು.

1. Post applied for
2. Name of the Candidate
3. Father's Name
4. Address
5. Date of Birth
6. Educational Qualifications
7. Technical Qualifications
8. Whether belongs to SC/ST/OBC/Ex-SM
9. Experience
10. Extra Curricular Activities
11. Languages known (Read, Write, Speak)

ಅರ್ಜಿಯ ಜೊತೆ ಅಗತ್ಯ ಸರ್ಟಿಫಿಕೇಟ್‌ಗಳ ದೃಢೀಕೃತ ಪ್ರತಿಗಳು, ಪಾಸ್‌ಪೋರ್ಟ್ ಸೈಜಿನ 2 ಫೋಟೋಗಳು ಇತ್ಯಾದಿಗಳನ್ನು ಇಟ್ಟು 24-11-2000ಕ್ಕೆ ಮೊದಲು ಕೆಳಗಿನ ವಿಳಾಸಕ್ಕೆ ತಲುಪುವಂತೆ ಸಲ್ಲಿಸಬೇಕು.

**The Additional General Manager (PRA)**
**Airports Authority of India (International Airports Division)**
**Nethaji Subhaschandra Bose International Airport Calcutta - 700 052.**

---

**6ನೇ ಪುಟದಿಂದ**

ಪ್ರಾಣನೂ ಕೊಡಿಕೆ ಸಿದ್ಧ ಆಗಿ ನಮ್ಮನ್ನ ಕಾಪಾಡಿದ ಮಹಾಶಕ್ತಿ ನೀನ್, ನೀನ್ ಮನುಷ್ಯನಲ್ಲ ನಮ್ಮ ಪಾಲಿಗೆ ಆಪತ್‌ಕಾಲಲಿ ಕಾಪಾಡಿದ ಆಪದ್ಬಾಂದವ ತಾ ಎಲ್ಲವೂ ಮನಃಪೂರ್ವಕವಾಗಿ ಹರಸಿದೊ. ಅಪ್ಪೋತ್ತಿಗೆ ಇನ್ನೊಬ್ಬ ಆ ಬಸ್ಸಿಲಿದ್ದ ಮಹಾಶಯ ಬಂದ್ ರಾಜುನ ಕೈಹಿಡದ್ ರಾಜು ಮಂಜ್ಞ ನಾವುಗಳು ಯಾರೊ ಯಾವ ಊರವೋ ನಿಂಗೆ ಗೊತ್ತಿಲ್ಲೆ. ಆದ್ರೂ ನೀನ್ ಒಳ್ಳೆ ಜನಿಕೆ ಒಳ್ಳೆವನಾಗಿ ವಂಚಕರಿಗೆ ಯಮನಂತೆ ಬಂದ್ ನಮ್ಮ ಕಾಪಾಡಿದ ಕೀರ್ತಿ ಮತ್ತೆ ನಮ್ಮೆಲ್ಲವರ ಆಶೀರ್ವಾದ ನಿನ್ನ ಮೇಲೆ ಉಟ್ಟು. ಇನ್ನು ಮುಂದೆ ಕೂಡ ಆ ದೇವರು ನಿಂಗೆ ಆಯುರಾರೋಗ್ಯ ಕೊಡಲಿ ನಮ್ಮ ಕಿಂಚಿತ್ ಕಾಣಿಕೆನ ಸಂತೋಷಲಿ ನೀನು ತಕಣಕು ತಾ ಹೇಳಿ ಅಂವಂಗೆ ಅಲ್ಲಿ ಜನ ಕೊಟ್ಟಂತಹ, ಚಿನ್ನಾಭರಣಗಳ, ಹಣನೆಲ್ಲಾ ಒಟ್ಟು ಏಳೆಂಟ್ ಸಾವಿರ ಆದು ಒಂದು ಕೈ ಚೌಕಲಿ ಕಟ್ಟಿ ಬುಟ್ಟ್ ರಾಜುನ ಕೈಗೆ ಕೊಟ್ಟೊ. ಅಪ್ಪೋತ್ತಿಗೆ ಆ ಮಧ್ಯೆ ರಾತ್ರಿಲಿ ಆ ಬಸ್ಸಲಿದ್ದವುಕೆಲ್ಲಾ ಇನ್‌ಸ್ಪೆಕ್ಟರ್ ತಮ್ಮಯ್ಯನವು ಟೀ, ಕಾಫಿ, ತರ್ಸಿ ಕೊಟ್ಟೊ ಎಲ್ಲವೂ ಈಗ ನೆಮ್ಮದಿಲಿ ಆ ಚಳಿ ಒಳಗೆ ಚಾ ಕುಡಿತಿದ್ದೊ.

ಇದರ ಮಧ್ಯೆ Mr. ರಾಜು ಮಂಜನ ಆಫೀಸ್‌ನ ಒಳಗೆ ಕರ್ದ್ ಹೇಳಿದೊ ನಿಮ್ಮ ಮನೆ ಅಡ್ರಸ್‌ನ ಮತ್ತೆ ನಿಮ್ಮ ಪೋಟೋನ ಈಗ ಕೊಡೋಕು ನಾನ್ ನಮ್ಮ ಗೃಹಮಂತ್ರಿಗಳ ಕಡೇಂದ ನಿಂಗೆ ಶೌರ್ಯ ಪ್ರಶಸ್ತಿ ಮತ್ತೆ ಸನ್ಮಾನ ಮಾಡಿಕೆ ರೆಕಮಂಡ್ ಮಾಡಿನೆ ಹೇಳಿ ಕಂಡ್ ಒಂದು ಅರ್ಜಿನ ಬರ್ದ್‌ಕಂಡೋ. ಆ ಅರ್ಜಿಗೆ ಈ ಬಸ್ಸಿಲಿದ್ದ ಕೆಲವು ಮುಖ್ಯಸ್ಥರ ಸಿಗ್ನೇಚರ್‌ಗಳೊಟ್ಟಿಗೆ ರಾಜುದೂ ಕೂಡಾ ಪೋಟೋ ಮತ್ತೆ ಸಹಿ ಆತ್.

ಬಸ್ಸಿಲಿ ಬಂದವಕೆ ಹೊಟ್ಟೆಗೆ ಬಿಸಿ ಚಾಯ ಬಿದ್ದಾದ ಮೇಲೆ ಸ್ವಾಮಿ ಇನ್‌ಸ್ಪೆಕ್ಟರ್‌ರವರೇ ನಾವು ಹೊರಟವೆ. ಅಂದ್ರೆ ಮಾತ್ರ ಈ ದರೋಡೆಕೋರರಿಗೆ ಪಾಸಿ ಶಿಕ್ಷೆನೇ ನೀವು ಕೊಡೋಕು ಅವರ್‍ನ ಬುಡಿಕಾಗವ್. ನಾವು ಎಲ್ಲಾ ಸೇರಿ ಕೇಳಿ ಕಂಡವೆತ್ತೇಳಿ ಅವುಕೆ ವಿಶ್‌ಮಾಡಿ ಹೊರಟೊ. ಇನ್‌ಸ್ಪೆಕ್ಟರ್ ತಮ್ಮಯ್ಯನವು ಬಸ್‌ನವರೆಗೂ ಬಂದ್ ರಾಜುನ ಕೈಹಿಡ್ದ್ ಕುಲಕಿ Wish you good luck Mr. Raju ತ್ತಾ ಹೇಳಿ ಬೀಳ್ಕೊಟ್ಟೊ.

(ಮುಂದ್‌ವರ್ದದೆ)

ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು

---

ಕೊಟ್ಟು ನಿಷ್ಠೂರನಾಗುವುದಕ್ಕಿಂತ ಕೊಡದಿರುವುದೇ ಒಳ್ಳೆಯದು

# ವಯಸ್ಕ ಮಹಿಳೆಯರಿಗೆ ಏಳಿಗೆಯ ಸಮಯ !

ಇಂದು ಪ್ರತಿಯೊರ್ವ ಹೆಂಗಸೂ, ತನ್ನ ವಯಸ್ಸನ್ನು ಪರಿಗಣಿಸದೆಯೇ ಕ್ರಿಯಾತ್ಮಕವಾಗಿರಬೇಕೆಂದು ಹಾಗೂ ಸುಂದರವಾಗಿರಬೇಕೆಂದು ಬಯಸುತ್ತಾಳೆ. ಜೀವನ ಮಟ್ಟದಲ್ಲಿನ ಸುಧಾರಣೆ ಬಯಸುವ ಆಧುನಿಕ ಹೆಂಗಳೆಯರ ಬಯಕೆಗಳಿಗೆ. ಸೂಕ್ತ ತಜ್ಞರ ಮೇಲ್ವಿಚಾರಣೆಯಲ್ಲಿ ನೀಡುವಂತಹ ಹಾರ್ಮೋನ್ ಪುನಃಸ್ಥಾಪನೆಯ ಚಿಕಿತ್ಸೆಯೇ (ಎಚ್‌ಆರ್‌ಟಿ) ಸರಿಯಾದ ಮಾರ್ಗವೆಂದು ವಿಶ್ವಾದ್ಯಂತದ ಆರೋಗ್ಯ ತಜ್ಞರು ನಂಬುತ್ತಾರೆ. ವೈದ್ಯರು ಹಾಗೂ ವಯಸ್ಕ ಮಹಿಳೆಯರು ಒಂದೇ ದಿಕ್ಕಿನಲ್ಲಿ ಯೋಚಿಸುತ್ತಿರುವಂತಹ ಈ ಸಂದರ್ಭದಲ್ಲಿ ಸ್ತ್ರೀಯರ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಕಳೆದ 18ನೇ ಅಕ್ಟೋಬರ್, 2000ವನ್ನು ವಿಶ್ವ ಋತುಬಂಧ ದಿನವಾಗಿ (World Menopause Day) ವಿಶ್ವ ಆರೋಗ್ಯ ಸಂಸ್ಥೆಯು ಘೋಷಿಸಿತು.

ಕಳೆದ ಮೂವತ್ತು ವರ್ಷಗಳಲ್ಲಿ ನಾಟಕೀಯವಾಗಿ ಬದಲಾದ ಹೆಂಗಸರ ಒಂದು ವಿಭಾಗವೇನಾದರೂ ಇದ್ದರೆ, 'ಅದು ನಲವತ್ತರಿಂದ ಅರುವತ್ತರ ವಯಸ್ಕರು ಹಾಗೂ ಅದನ್ನು ಮೀರಿದವರು' ಎಂದು, ಸುಂದರವಾಗಿ, ಕ್ರಿಯಾತ್ಮಕವಾಗಿ ಹಾಗೂ ಯೌವನದಲ್ಲೇ ಇರಲು ಬಯಸುವಂತಹ ಋತುಬಂಧಕ್ಕೊಳಗಾದ (ಮುಟ್ಟು ನಿಂತಂತಹ) ಹೆಂಗಸರಿಗೆ, ಹಾರ್ಮೋನುಗಳ ಸರಿಯಾದ ಸಂಯೋಜನೆಯನ್ನು ಕಂಡು ಹಿಡಿಯಲು ತೀವ್ರವಾಗಿ ದುಡಿಯುತ್ತಿರುವ ವೈದ್ಯಕೀಯ ತಜ್ಞರು ಹೇಳುತ್ತಾರೆ. ಕಳೆದ ದಶಕಗಳಲ್ಲಿನ ಭಾರತೀಯ ಹೆಂಗಳೆಯರು, ಋತುಬಂಧವು, ತಮ್ಮ ಜೀವನದಲ್ಲಿನ ದುಃಖದ ಮೈಲಿಗಲ್ಲು ಎಂಬುದಾಗಿ ಒಪ್ಪಿಕೊಳ್ಳತೊಡಗಿದರು. ಋತುಬಂಧವು ತಮ್ಮ ಸ್ತ್ರೀತ್ವಕ್ಕೇ ಪೂರ್ಣ ವಿರಾಮ ನೀಡಿತಲ್ಲದೆ, ಈ ಪರಿಸ್ಥಿತಿಯಲ್ಲಿನ ಒಂದು ನಿಶ್ಚಿತವಾದ ಅನಾನುಕೂಲಕರ ರೋಗ ಲಕ್ಷಣಗಳನ್ನು ತಾವು ಒಪ್ಪಿಕೊಳ್ಳಬೇಕಾದಂತಹ ಜೀವನದ ಒಂದು ಹಂತಕ್ಕೆ ತಮ್ಮನ್ನು ಕೊಂಡೊಯ್ದಿದ್ದಷ್ಟೇ ಅಲ್ಲ, ಭರವಸೆಯನ್ನು ಕಳೆದುಕೊಂಡಂತಹ, ಅಸಹಾಯಕತೆಯ ಹಾಗೂ ಖಿನ್ನತೆಯಿಂದ ಬಳಲುವಂತಹ ಸ್ಥಿತಿಗೆ ತಮ್ಮನ್ನು ತಂದಿತು ಎಂದೂ ಅವರು ಭಾವಿಸಿದರು. ಅವರು ಋತುಬಂಧವು ಒಂದು ಶಕ್ತಿಯಾಗಿ ತಮ್ಮ ಲೈಂಗಿಕ ಜೀವನಕ್ಕೇ ಪೂರ್ಣ ವಿರಾಮ ನೀಡುವುದಲ್ಲದೆ, ವಯಸ್ಸಾದಂತೆ ತಮ್ಮ ತ್ವಚೆ, ಕೂದಲು ಮತ್ತು ದೈಹಿಕ ಆಕಾರವು ಕಳೆಗುಂದುತ್ತದೆ ಎಂಬುದನ್ನು ಒಪ್ಪಿಕೊಂಡರು. ಜೋತು ಬಿದ್ದ ಸ್ತನಗಳು, ಸುಕ್ಕುಗಳು ಅಥವಾ ಒಣಗಿದಂತಹ ಒರಟಾದ ತ್ವಚೆ, ಶಕ್ತಿಹೀನ ಎಲುಬುಗಳು, ನೋವಿನಿಂದ ಕೂಡಿದ ಲೈಂಗಿಕಾನುಭವ ಹಾಗೂ ಜನನಾಂಗ ಸಂಬಂಧಿತ ತೊಂದರೆಗಳು ಇವುಗಳೆಲ್ಲ ಅನಿವಾರ್ಯ ಎಂದು ಹೆಂಗಸರು ಭಾವಿಸಿದರು. ಸಂಕ್ಷಿಪ್ತದಲ್ಲಿ ಹೇಳುವುದಾದರೆ, 45ರ ಹಾಗೂ ಅದನ್ನು ಮೀರಿದ ಹೆಂಗಳೆಯರು ವಯಸ್ಸಾಗುವ ಪ್ರಕ್ರಿಯೆಯನ್ನು ಒಪ್ಪಿಕೊಂಡರಲ್ಲದೆ, ತಮ್ಮ ಗೌರವಯುತವಾಗಿ ವಯಸ್ಕರಾಗುವ ಸ್ಥಿತಿಗೆ ರಾಜಿಯಾಗಿ ಪರಸ್ಪರ ಶುಭ ಹಾರೈಸಿಕೊಂಡರು.

ಈ ವರ್ಷ ಅಕ್ಟೋಬರ್ 18,2000ವನ್ನು ವಿಶ್ವ ಋತುಬಂಧ ದಿನವನ್ನಾಗಿ ಆಚರಿಸುವ ಮೂಲಕ ವಿಶ್ವಾದ್ಯಂತದ ವೈದ್ಯಕೀಯ ಕ್ಷೇತ್ರದವರು ಈ ಸ್ಥಿತಿಯನ್ನು ನಾಟಕೀಯವಾಗಿ ತಿರುವು ಮುರುವು ಮಾಡಿದ ಸಂಭ್ರಮವನ್ನು ಕಾಣಲಿದ್ದಾರೆ. ಇಲ್ಲಿನ ಕೇಂದ್ರೀಕೃತ ದೃಷ್ಟಿಯು, ವಯಸ್ಕ ಮಹಿಳೆಯರು, ಸಂಪೂರ್ಣ ಹೊಸ ಜೀವನಶೈಲಿಯನ್ನು ಕಂಡುಕೊಂಡಿದ್ದಾರಲ್ಲದೆ, ಕೆಲವರು ವಿಶ್ವದಲ್ಲಿಯೇ ಅತ್ಯಂತ ಸುಂದರ ಹಾಗೂ ಯಶಸ್ವಿ ಹೆಂಗಸರಾಗಿದ್ದಾರೆಂಬ ವಾಸ್ತವ ಸಂಗತಿಯ ಮೇಲೆ ಬೆಳಕು ಚೆಲ್ಲಲಿದೆ. ನಿರ್ದಿಷ್ಟವಾಗಿ ಸುಶಿಕ್ಷಿತ, ನಗರ ಪ್ರದೇಶದ ಭಾರತೀಯ ಮಹಿಳೆಯರ ಬಗ್ಗೆ ಮಾತನಾಡುತ್ತ, ವಯಸ್ಕ ಮಹಿಳೆಯರ ಮನೋಸ್ಥಿತಿಯಲ್ಲಿಯೇ ಸಂಪೂರ್ಣ ಬದಲಾಗಿದೆ ಎಂದು ವೈದ್ಯಕೀಯ ತಜ್ಞರು ಹೇಳುತ್ತಾರೆ. ಇಂದು, ಅವರು ಕ್ರಿಯಾತ್ಮಕ ಲೈಂಗಿಕ ಜೀವನದ ಸಂತಸವನ್ನು ಅನುಭವಿಸಲು, ಉದ್ಯೋಗದಲ್ಲಿನ ಯಶಸ್ಸು, ದೈಹಿಕದಾರ್ಢ್ಯತೆ, ಮೋಹಕವಾಗಿ ಕಾಣುವಿಕೆ ಹಾಗೂ ಸಮಾಜದಲ್ಲಿ ಉನ್ನತ ಸ್ಥಿತಿಯನ್ನು ತಮ್ಮ ಜೀವನದ ಮುಸ್ಸಂಜೆಯ ವರ್ಷಗಳು ಎಂದು ಹೇಳುವಂತಹ ದಿನಗಳಲ್ಲೂ ಬಯಸುತ್ತಾರೆ. ಅವರ ಬಯಕೆಗಳು ಹಿಂದೆಂದಿಗಿಂತಲೂ ಉನ್ನತವಾಗಿವೆಯಲ್ಲದೆ, ಅವರು ನಿವೃತ್ತಗೊಳ್ಳಲು ಸಿದ್ಧವಾಗುವವರೆಗೆ ತಮ್ಮ ವೃತ್ತಿ ಮತ್ತು ಉದ್ಯೋಗಗಳಲ್ಲಿ ಕಠಿಣ ಪರಿಶ್ರಮದಿಂದ, ಹೆಚ್ಚು ಕೇಂದ್ರೀಕೃತ ದೃಷ್ಟಿಯಿಂದ ದುಡಿಯಲು ಸಾಧ್ಯವಾಗಿದೆ. ಅವರು ಬಯಸುವವರೆಗೆ, ಯಾವುದೇ ಕೀಳರಿಮೆಯಿಲ್ಲದೆ ಅಥವಾ ತಮ್ಮ ವಯಸ್ಸಿನ ವೈಕಲ್ಯಗಳಿಲ್ಲದೆ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಬಯಸುತ್ತಾರೆ. ಅವರು ಹರಟೆ ಹೊಡೆಯುವಂತಹ 'ಮುದಿ ಹೆಂಡಂದಿರಿಗಾಗಿ' ಹಾಗೂ ಕಾಲ ತೀರಿದವರಂತೆ ತಮ್ಮನ್ನು ನೋಡುವುದನ್ನು ಬಯಸುವುದಿಲ್ಲ.

— ವಿಮಲಾ ಪಾಟೀಲ್

---

## ಹನಿಗವನ ಪ್ರೀತಿಸಿದ್ದೆ

ಪ್ರೀತಿಸುತ್ತಿದ್ದಳು ಪ್ರೇಮ
ನನ್ನನ್ನು
ಪ್ರೇಮಿಸಿದ್ದೆ ನಾನು
ಅವಳ ಗುಣವನು
ಆದರೆ, ಅದಕ್ಕಿಂತಲೂ
ಹೆಚ್ಚಾಗಿ ಪ್ರೀತಿಸಿದೆ
ಅವಳ ತಂಗಿಯನ್ನು

ಹರೀಶ್ ಹೊಸಮನೆ, ಕೆ. ಚೆಟ್ಟಳ್ಳಿ

---

ಖರ್ಚು ಮಾಡದಿರುವ ಬದುಕು ಯಾಕೆ

# "ರಾತ್ರಿ ಬೇಟೆಯ ಶೂರ!"

– ಬಾರಿಯಂಡ ಜೋಯಪ್ಪ

ಕಂತಾಪುರದಲ್ಲಿ ಹತ್ತಾರು ಕುಟುಂಬಗಳು ಜೀವನ ಸಾಗಿಸುತ್ತಿದ್ದವು. ಏಳೆಂಟು ಮೈಲು ದೂರದಲ್ಲಿ ಅಂಗಡಿ. ಜನ ಸಂಪರ್ಕವೇ ಇಲ್ಲದ ಊರು. ಆ ಊರ ಜನರ ಊಟದಲ್ಲಿ ಕಾಡಿನ ಮಾಂಸದ ತುಂಡು ಇಲ್ಲದಿರುವ ದಿನ ವಿರಳ. ಹಸಿ ಮಾಂಸ ಇಲ್ಲದಿದ್ದರೆ ಉಪ್ಪಣವಾದರೂ* ಇರುತ್ತಿತ್ತು.

ಈ ಊರಿನ ಸಣ್ಣಯ್ಯ ಕೇಪಿನ ಕೋವಿಯ ಒಡೆಯ. ಆ ಕೋವಿ ಕಂಡರೆ ಅವನಿಗೆ ತುಂಬಾ ಪ್ರೀತಿ. ಅದಕ್ಕೆ ತಿಂಗಳಿಗೊಮ್ಮೆ ಸ್ನಾನ. ಗುಂಡು ಹೊಡೆದು ಕರಿ ತುಂಬಿಕೊಳ್ಳುತ್ತಿದ್ದ ಕೊಳವನ್ನು ತಡೆಗೋಲಿನಿಂದ ಒರೆಸಿದರೆ ಸಾಲದು. ನೀರು ತುಂಬಿ ತೊಳೆದು ಆ ಪಸೆ ತೆಗೆದು, ಬಿಸಿಲಿಗಿಟ್ಟು, ಎಣ್ಣೆ ನೀವಿ, ಆ ಕೋವಿಯ ಅಂಗಾಂಗಕ್ಕೆ ತೆಂಗಿನೆಣ್ಣೆ ಸೀಮೆಣ್ಣೆ ಸುರಿದು 'ಕೊತ್ತಿ'ಯನ್ನು ಏರಿಸಿ ಇಳಿಸಿ ಅಣಿಮಾಡಿ ಪಾತಿಯ 'ಮಿರ ಮಿರ' ಮೈ ನೋಡಿ ಆನಂದಿಸುತ್ತಿದ್ದ.

ಇದಾದ ಮೇಲೆ ಲೋಡು ಮಾಡುವ ಕೆಲಸ. ಮಾಪಿಳ್ಳೆ ಮದ್ದನ್ನು ತುಂಬಿ ತೆಂಗಿನ ಜುಟ್ಟಿನ ಉಂಡೆಯನ್ನು ನುಗ್ಗಿಸಿ ಗಟ್ಟಿ ಮಾಡಿ ನಂತರ ಚಿಲ್ಲನ್ನೋ ತರಿಕಲ್ಲನ್ನೋ ಹಾಕುವನು. ಮತ್ತೆ ಇನ್ನೊಂದು ತೆಂಗಿನ ಜುಟ್ಟಿನ ಉಂಡೆ ಹಾಕಿ ಕುಟ್ಟಿ ಅಚ್ಚು ಕೋಲಿನಿಂದ ಅಳತೆ ಮಾಡಿ ನಾಕು ಬೆರಳಾದರೆ ಲೋಡು ಸಕತ್ತಾಗಿದೆ ಎಂದುಕೊಳ್ಳುತ್ತ ಕೋವಿಯನ್ನು ಬೆಸಗೆಮಾಡಿ ನೇತುಹಾಕಿ ರಾತ್ರಿಯಾಗುವುದನ್ನೇ ಜಪಿಸುತ್ತ ಕೂರುವನು.

ರಾತ್ರಿ ಹೆಡ್‌ಲೈಟನ್ನು ಹಣೆಗೆ ಕಟ್ಟಿ ಮರಕ್ಕೆ ಬೆಳಕು ಬಿಡುತ್ತ ಆ ಬೆಳಕಲ್ಲಿ ಕೋವಿಯನ್ನೆತ್ತಿ ಗುರಿ ಸರಿ ಮಾಡಿ ಒಂದೆರಡು ತುಂಬಿನ ವಸ್ತುಗಳನ್ನು ಜೇಬಿಗಿಳಿಸಿಕೊಂಡು ಗದ್ದೆಯತ್ತಲೋ ಕಾಡಿನತ್ತಲೋ ನಡೆಯುತ್ತಿದ್ದ.

ಸಣ್ಣಯ್ಯ ಕಾಡಿನಲ್ಲಿ ನಡೆಯುತ್ತಿದ್ದರೆ ಮೈಯೆಲ್ಲಾ ಕಣ್ಣಾದಂತೆ, ಕಿವಿಯಾದಂತೆ! ನಾಲ್ಕು ಹೆಜ್ಜೆ ನಡೆಯುವುದು ಮತ್ತೆ ಸದ್ದನ್ನು ಆಲಿಸುವುದು. ಮತ್ತೆ ನಡೆಯುವುದು ಸದ್ದಾಲಿಸುವುದು ಮಾಡುತ್ತಿದ್ದ.

ಒಮ್ಮೆ ಒಂದು ಹೆಜ್ಜೆಯನ್ನು ಎತ್ತಿದ್ದಾನೆ. ದೂರದಲ್ಲೇನೋ ಸದ್ದಾದಂತಾಯಿತು. ಎತ್ತಿದ ಹೆಜ್ಜೆಯನ್ನು ಹಾಗೆ ಎತ್ತಿಕೊಂಡೇ ನಿಂತ. ಆ ಸದ್ದು ದೂರವಾಗಲು ಎತ್ತಿದ ಹೆಜ್ಜೆಯನ್ನಿಳಿಸಿದ. ಹೀಗೇ ನಡೆಯುತ್ತಿದ್ದಾಗ ಅದೆಂಥದ್ದೋ 'ಮಿಣಿ ಮಿಣಿ' ಕಣ್ಣು ಕಂಡಿತು. ಒಮ್ಮೆ ಇಲ್ಲಿ, ಒಮ್ಮೆ ಅಲ್ಲಿ, ಮತ್ತೊಮ್ಮೆ ದೂರದಲ್ಲಿ ಆ ಮೇಲೆ ಎಲ್ಲೋ ಮಾಯ. ನೆಲದ ಮಟ್ಟದಲ್ಲೇ ಚುರುಕಾಗಿ ಹೋದ ಪ್ರಾಣಿ ಯಾವುದಿರಬಹುದು? ದೆವ್ವ ಇದ್ದೀತು ಎನಿಸಿ ಕೂಡಲೇ ಮನೆಗೆ ಬಂದುಬಿಟ್ಟ.

ಬೆಳಿಗೆದ್ದು ಆ ಜಾಗಕ್ಕೆ ಹೋಗಿ ನೋಡಿದರೆ ಹೆಬ್ಬಾವು ಸರಿದು ದಾರಿ ಸವೆದಂತಿದೆ. ಸುಮಾರು ಒಂದೂವರೆ ಅಡಿ ದಪ್ಪದಲ್ಲಿ ದಾರಿ ಸವೆದಿತ್ತು. ಸಧ್ಯ ಬಚಾವಾದ. ರಾತ್ರಿ ಅದು ಸುರುಳಿ ಸುತ್ತಿ ಇವನ ಕಾಲು ಹಿಡಿದುಕೊಂಡಿದ್ದರೆ? ಹೆಬ್ಬಾವನ್ನು ನೆನೆದಾಗ ಸಣ್ಣಯ್ಯ ಬೆವೆತುಹೋಗುತ್ತಾನೆ. ಅವನಿಗೆ ಹಿಂದಿನದೊಂದು ಕಥೆ ನೆನಪಿಗೆ ಬಂತು. ಒಬ್ಬ ಸೇಂದಿ ಕೊಯ್ಯಲೆಂದು ಮರ ಹತ್ತಿ ಸೇಂದಿಯನ್ನು ತೆಗೆದು ಗಡಿಗೆಯನ್ನು ಮತ್ತು ಕತ್ತಿಯನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ಇಳಿಯುತ್ತಾ ಇದ್ದ. ಇನ್ನೇನು ನೆಲಕ್ಕೆ ಹೆಜ್ಜೆ ಇಡಬೇಕು ಅಂತ ಹೆಜ್ಜೆ ಇಟ್ಟದ್ದು ಹೆಬ್ಬಾವಿನ ಬಾಯಿಗೆ. ಹಾವು ಇವನ ಕಾಲನ್ನು ನುಂಗುತ್ತಾ ಇತ್ತು, ಓಡಲು ಆಗಲೇ ಇಲ್ಲ. ತೊಡಂಗಿನಲ್ಲಿದ್ದ ಕತ್ತಿಯನ್ನು ಹಿಡಿದುಕೊಂಡು ಹಾವಿನ ಬಾಯಿಗೆ ಹಿಡಿದ. ಅದು ನುಂಗುತ್ತ ಇದ್ದಂತೆ ಹರಿತ ಕತ್ತಿ ಅದರ ಬಾಯನ್ನು ಸೀಳಿತು. ಎರಡು ಸೀಳಾಗಿ ಬದ್ದಂಥ ಆ ಹಾವನ್ನು ಸೀಳಿದ್ದು ನೆನಸಿ ಕೊಂಡಾಗ ಸಣ್ಣಯ್ಯನ ಹೊಟ್ಟೆ ಒಳಗೆ ಚಳಿ ನುಗ್ಗದಂತಾಯಿತು.

ಈ ರೀತಿ ಆದ ಮೇಲೆ ರಾತ್ರಿ ಕಾಡಿಗೆ ಹೋಗಲು ಸಣ್ಣಯ್ಯನಿಗೆ ಪುಕುಪುಕು. ಆದರೂ ಮನಸ್ಸು ಕೇಳದೆ ಒಂದು ರಾತ್ರಿ ಹೊರಟ. ಅಲ್ಲೊಂದು ಗೋಳಿ ಮರ. ಮರದ ತುಂಬಾ ಹಣ್ಣುಗಳು. ಅದನ್ನು ತಿನ್ನಲು ಪಾಂಜಗಳು (ಹಾರುವ ಬೆಕ್ಕು) ಬಂದೇ ಬರುತ್ತವೆ ಎಂದು ಒಂದು ಅಂದಾಜು. ಸ್ವಲ್ಪ ದೂರ ನಿಂತು ಆಲಿಸಿದ. ತಟಪಟನೆ ಹಣ್ಣು ಬೀಳುವ ಸದ್ದು, ಖುಷಿಗೆ ಕೂದಲು ನಿಮಿರಿತ್ತು. ಏನೋ ಇರಬಹುದೆಂದು ಬೆಳಕು ಹಾಯಿಸಿದ. ಫಳ್‌ನೆ ಎರಡು ಕಣ್ಣುಗಳು ಹೊಳೆಯುವುದು ಕಂಡಿತು. ತಕ್ಷಣ ಗುಂಡು ಹಾರಿಸಿದ. 'ಡಬೂ' ಆ ಸದ್ದಿಗೆ ಕ್ಷಣ ಕಾಲ ಕಾಡು ನಡುಗಿತು. ಆದರೆ ಪಾಂಜ ಬೀಳಲಿಲ್ಲ. ಅತ್ತ ಇತ್ತ ಬೆಳಕು ಬಿಟ್ಟ. ಆ ಕಣ್ಣುಗಳು ಹಾಗೇ ನೋಡುತ್ತಿವೆ! "ಅಲ್ಲೇ ಇದ್ದೀಯ ತಾಳು...." ಮತ್ತೆ ಚುರುಕು ಚುರುಕಾಗಿ ಲೋಡು ಮಾಡಿದ. ಈಡು ಮೂರು ಲೋಕವನ್ನೂ ಎಚ್ಚರಿಸಿತು. ಪಾಂಜ ಬೀಳಲಿಲ್ಲ. ಮತ್ತೆ ಬಿಟ್ಟ ಬೆಳಕೊಳಗೆ ಅದೇ ಕಣ್ಣುಗಳು. ಇದು ಏನು? ಪಾಂಜವೇ... ಹೆಬ್ಬಾವೇ... ಅಥವಾ ದೆವ್ವ ಇರಬಹುದಾ? ಯಾಕೆಂದರೆ ದೆವ್ವದ ಬಗ್ಗೆ ಹಲವಾರು ಕಥೆಗಳನ್ನು ಕೇಳಿ ಹೆದರಿ ಕೊಂಡಿದ್ದ. ದೆವ್ವ ಎಷ್ಟೋ ಜನರನ್ನು ಕಾಡಿನಲ್ಲಿ ದಾರಿ ತಪ್ಪಿಸಿದ್ದು, ಕಾಡಿನಿಂದ ಮಾಂಸವನ್ನು ಹೊತ್ತು ತರುವಾಗ ಅದು ಎಳೆದು ಕೊಂಡದ್ದು ಇತ್ಯಾದಿ ಕಟ್ಟು ಕಥೆಗಳನ್ನು ನಿಜವೆಂದೇ ತಿಳಿದ ಸಣ್ಣಯ್ಯ ಇಂದು ದೆವ್ವ ಎನಿಸಿದಾಗ ಇನ್ನೊಂದು ಗುಂಡು ಹಾರಿಸುವ ಯೋಜನೆ ಹಿಂಜರಿಯಿತು. ನಾಳೆ ಬಂದು ನೋಡೋಣ ಅಂತ ಪುಕ್ಕಲು ಮನಸ್ಸು ಹೇಳಿತು. ಬೆಳಿಗ್ಗೆ ಬಂದು ನೋಡಿದರೆ ಪಾಂಜ ಆ ಮರದ ಕೊಂಬೆ ಹಿಡಿದು ನೇತಾಡುತ್ತಿತ್ತು ಹೆಣವಾಗಿ.

---

## NEWS PAPER ಹುಟ್ಟು

North, East, West, South ಮೊದಲ ಅಕ್ಷರಗಳನ್ನು ಸೇರಿಸಿದಾಗ News ಆಗುತ್ತದೆ.

ಮೇಲಿನ ಶಬ್ದಗಳೊಡನೆ Past And Present Events Report ಎಂಬ ಪದಗಳು ಸೇರಿ News Paper ಎಂಬ ಪದ ಹುಟ್ಟಿಕೊಂಡಿತು.

*— ಊರೋಳನ ಬೀನ ಸುಬ್ಬಯ್ಯ, ಅವಂದೂರು.*

---

**ನಾಲಿಗೆ ಉದ್ದ ಇದೆಯೆಂದು ಬಾಯಿಗೆ ಬಂದಂತೆ ಮಾತನಾಡಬಾರದು**

# ಕೊಡಗು ಗೌಡ ವಿದ್ಯಾ ಸಂಘದ ಆಡಳಿತದ ಜವಾಬ್ದಾರಿ ಯುವಕರ ಹೆಗಲಿಗೆ, ಶತಮಾನದ ಐತಿಹಾಸಿಕ ಚುನಾವಣೆಯಲ್ಲಿ ಹೊಸೂರು ರಮೇಶ್ ಜೋಯಪ್ಪ ವಿಜಯ.

ತೊಂಭತ್ತೆರಡು ವರ್ಷಗಳ ಇತಿಹಾಸವನ್ನು ಹೊಂದಿರುವ, ಗೌಡ ಜನಾಂಗದ ಸಂಘಟನೆ, ಅಭಿವೃದ್ಧಿ, ಗೌರವಗಳ ಪ್ರತೀಕವಾಗಿರುವ ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷಗಿರಿಗೆ ಅದರ ಇತಿಹಾಸದಲ್ಲೇ ಪ್ರಥಮ ಬಾರಿಗೆ ಏರ್ಪಟ್ಟ ಚುನಾವಣೆಯಲ್ಲಿ ಹೊಸೂರು ರಮೇಶ್ ಜೋಯಪ್ಪನವರು ಭಾರೀ ಅಂತರದ ಗೆಲುವು ಸಾಧಿಸಿ ಹೊಸ ಸಹಸ್ರಮಾನದಲ್ಲಿ ಪ್ರಥಮ ಕೊಡಗು ಗೌಡ ವಿದ್ಯಾಸಂಘದ ಚುನಾಯಿತ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.

ನವೆಂಬರ್ 12ರಂದು ನಡೆದ ಬಿರುಸಿನ ಚುನಾವಣೆಯಲ್ಲಿ ಅವರು ತಮ್ಮ ಸಮೀಪದ ಪ್ರತಿಸ್ಪರ್ಧಿ ಕೋಳುಮುಡಿಯನ ಅನಂತ್‌ಕುಮಾರ್‌ರವರನ್ನು 243 ಮತಗಳ ಅಂತರದಿಂದ ಸೋಲಿಸಿ ಆಯ್ಕೆಯಾದರು. ಈ ಹಿಂದೆ ಅಧ್ಯಕ್ಷರಾಗಿದ್ದ ಕುಯ್ಯುಮುಡಿ ಪೂರ್ಣಯ್ಯ ಮತ್ತು ಉಪಾಧ್ಯಕ್ಷರಾಗಿದ್ದ ಪಂಜಿಪಳ್ಳ ವೆಂಕಪ್ಪನವರು ಕ್ರಮವಾಗಿ ಮೂರನೆ ಮತ್ತು ನಾಲ್ಕನೆ ಸ್ಥಾನಕೆ ತೃಪ್ತಿ ಪಟ್ಟುಕೊಳ್ಳಬೇಕಾಯಿತು. ಸಹಕಾರ್ಯದರ್ಶಿ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಅಂಬೆಕಲ್ಲು ಶ್ಯಾಂ ಕುಶಾಲಪ್ಪನವರು ತಮ್ಮ ಪ್ರತಿಸ್ಪರ್ಧಿ ಬಾಳಾಡಿ ಉತ್ತಯ್ಯನವರನ್ನು 186 ಮತಗಳ ಅಂತರದಿಂದ ಸೋಲಿಸಿ ಆಯ್ಕೆಗೊಂಡರು. ಇದಕ್ಕೂ ಮೊದಲು ಕೆಲವರು ಚುನಾವಣ ಕಣದಿಂದ ಹಿಂದಕ್ಕೆ ಸರಿದಿದ್ದರಿಂದ, ಸೂರ್ತಲೆ ಸೋಮಣ್ಣನವರು ಉಪಾಧ್ಯಕ್ಷರಾಗಿ, ಕೆ. ಆರ್. ವಿಧ್ಯಾಧರರವರು ಕಾರ್ಯದರ್ಶಿಯಾಗಿ, ಪೊನ್ನಚ್ಚನ ಸೋಮಣ್ಣನವರು ಕೋಶಾಧಿಕಾರಿಯಾಗಿ ಅವಿರೋಧವಾಗಿ ಆಯ್ಕೆಗೊಂಡರು.

**ಬೆಳವಣಿಗೆ ಸೂಚಕ ಚುನಾವಣೆ :** ಕೊಡಗು ಗೌಡ ಸಂಸ್ಥೆಗಳಲ್ಲಿ ಹಿಂದೆಂದೂ ಕಾಣದಿದ್ದ ಚುನಾವಣೆ ನವೆಂಬರ್ 12ರಂದು ನಡೆಯಿತು. ಗೌಡ ಸಮಾಜದ ರಸ್ತೆಯುದ್ದಕ್ಕೂ ಭಿತ್ತಿ ಪತ್ರಗಳನ್ನು ಹಿಡಿದಿದ್ದ ಯುವಕರು ತಮ್ಮ ತಮ್ಮ ಅಭ್ಯರ್ಥಿಗಳ ಪರವಾಗಿ ಮತ ಯಾಚಿಸುತ್ತಿದ್ದದು, ರಸ್ತೆ ಬದಿಗಳಲ್ಲಿ ಬ್ಯಾನರ್‌ಗಳು, ಪತ್ರಿಕೆಗಳಲ್ಲಿ ಜಾಹೀರಾತುಗಳು, ಹೆಚ್ಚು ಕಡಿಮೆ ಸಾರ್ವತ್ರಿಕ ಚುನಾವಣೆಗಳನ್ನು ನೆನಪಿಗೆ ತರುತ್ತಿದ್ದವು. ಹಿಂದೆಲ್ಲಾ ಅವಿರೋಧ ಆಯ್ಕೆಗಳು ನಡೆಯುತ್ತಿದ್ದವು. ಆದರೆ ಈಗಿನ ಚುನಾವಣೆ, ಅದರ ಭರಾಟೆ ನೋಡಿದರೆ ನಾವು ಎಚ್ಚೆತ್ತುಕೊಂಡಿದ್ದೇವೆ. ಹೊಸ ಸಹಸ್ರಮಾನಕ್ಕೆ ಸ್ಪರ್ಧೆಯೊಡನೆ ಮುನ್ನಡೆಯುತ್ತಿದ್ದೇವೆ ಎಂಬುದರ ಸೂಚಕ ಇದಾಗಿದೆ ಎಂದು ಕೆಲವು ಜನ ಮಾತನಾಡಿಕೊಳ್ಳುತ್ತಿದ್ದುದು ಸಂಗಾತಿಗೆ ಕೇಳಿಸಿತು. ಚುನಾವಣೆಯಲ್ಲಿ ಶೇ. 40% ರಷ್ಟು ಮತದಾರರು ಮತ ಚಲಾಯಿಸಿದರು. ಹಳ್ಳಿಗಳಿಂದ ಬಂದ ಮತದಾರರ ಸಂಖ್ಯೆ ಕಡಿಮೆಯಿರುವುದು ಗೋಚರಿಸಿತು. ಮತದಾರರಿಗಿಂತಲೂ ಅಭ್ಯರ್ಥಿಗಳ ಬೆಂಬಲಿಗರೇ ಹೆಚ್ಚು ಸಂಖ್ಯೆಯಲ್ಲಿದ್ದುದು ಕಂಡು ಬಂದಿತು. ಕಾಳೇರಮ್ಮನ ರಾಘವಯ್ಯನವರು ಚುನಾವಣಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದರು.

**ಭಾರೀ ಅಭಿನಂದನೆ :** ನೂತನ ಅಧ್ಯಕ್ಷರಾಗಿ ಹೊಸೂರು ರಮೇಶ್‌ರವರು ಮತ್ತು ಸಹ ಕಾರ್ಯದರ್ಶಿಯಾಗಿ ಅಂಬೆಕಲ್ಲು ಶ್ಯಾಂರವರು ಆಯ್ಕೆಯಾಗುತ್ತಿದ್ದಂತೆಯೇ ಅವರ ಬೆಂಬಲಿಗರು ಹಾರ್ದಿಕವಾಗಿ ಅಭಿನಂದಿಸತೊಡಗಿದರು. ಅಭಿಮಾನಿಗಳ ಅಭಿನಂದನೆಗಳ ನಡುವೆ ಕೊಡಗು ಸಂಗಾತಿಯೊಡನೆ ಮಾತನಾಡಿದ ನೂತನ ಅಧ್ಯಕ್ಷರು, ಈಗಿರುವ ಗೌಡ ವಿದ್ಯಾ ಸಂಘದ ಕಟ್ಟಡದ ಸ್ವಚ್ಛತೆಗೆ ಮೊದಲ ಆದ್ಯತೆ ಕೊಡುವುದಾಗಿ ತಿಳಿಸಿದರು. ಹತ್ತನೆ ತರಗತಿ ವಿದ್ಯಾರ್ಥಿಗಳ ಬದುಕಿನ ತಿರುವು ಆಗಿರುವುದರಿಂದ ಮತ್ತು ಈಗ ನೀಡುತ್ತಿರುವ ವಿದ್ಯಾರ್ಥಿ ವೇತನದಲ್ಲಿ ವಿದ್ಯಾರ್ಥಿಗಳ ಆರ್ಥಿಕ ಪರಿಸ್ಥಿತಿಯನ್ನು ಗುರುತಿಸದೇ ಇರುವುದರಿಂದ ಅದರ ಬಗ್ಗೆ ಗಮನ ನೀಡಿ ಕ್ರಾಂತಿಕಾರಕ ಬದಲಾವಣೆಗಳನ್ನು ಹಮ್ಮಿಕೊಳ್ಳುವ ಇರಾದೆಯನ್ನು ಸ್ಪಷ್ಟಪಡಿಸಿದರು. ಶ್ಯಾಂ ಕುಶಾಲಪ್ಪನವರು ಮಾತನಾಡಿ ಗರಿಷ್ಠ ಮಟ್ಟದ ಸದಸ್ಯತ್ವವನ್ನು ನೋಂದಾಯಿಸಿ ಸರ್ವರೂ ಗೌಡ ವಿದ್ಯಾ ಸಂಘದ ಬಗ್ಗೆ ಆಸಕ್ತಿ ತಳೆಯುವಂತೆ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದೆಂದು ತಿಳಿಸಿದರು.

**ಆಶಾ ಭಾವನೆ :** ಈಗಿನ ಚುನಾವಣೆಯ ಕಣದಿಂದ ಯುವಕರ ದಂಡೇ ಜನತೆಯ ನೇತಾರರಾಗಿದ್ದು, ಜನಾಂಗದ ಏಳಿಗೆಯಲ್ಲಿ ಎಷ್ಟರ ಮಟ್ಟಿಗೆ ಕಾಣಿಕೆ ಸಲ್ಲಿಸುವರೆಂಬುದನ್ನು ಕಾದು ನೋಡಬೇಕಾಗಿದೆ. ತರುಣ ಹೊಸೂರು ರಮೇಶ್‌ರವರು ಶತಮಾನದ ಪ್ರಥಮ ಅಧಕ್ಷರಾಗಿ ಆಯ್ಕೆಯಾಗಿರುವುದರಿಂದ ಕುರ್ಚಿಯ ಗೌರವವನ್ನು ಉಳಿಸಿಕೊಂಡು ಜನತೆಯನ್ನು ಮುನ್ನಡೆಸುವ ಮಹತ್ತರ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಈ ಸಂದರ್ಭದಲ್ಲಿ ಸಾಕಷ್ಟು ಅನುಭವಗಳನ್ನು ಹೊಂದಿರುವ ಯುವ ನೇತಾರರಾದ ಸೂರ್ತಲೆ ಸೋಮಣ್ಣನವರು ಮತ್ತು ಕೆ. ಆರ್. ವಿದ್ಯಾಧರರವರು ಅವರಿಗೆ ಸೂಕ್ತ ಸಹಾಯ ನೀಡಬಹುದು. ಒಟ್ಟಿನಲ್ಲಿ ಈ ಯುವಕರ ದಂಡು ಎಷ್ಟರ ಮಟ್ಟಿಗೆ ತಮಗೆ ವಹಿಸಿದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸುವರು ಎಂಬುದನ್ನು ಇಡೀ ಗೌಡ ಜನತೆ ಆಶಾ ಭಾವನೆಯಿಂದ ನೋಡುತ್ತಿದೆ.

**ಕೊಡಗು ಗೌಡ ವಿದ್ಯಾ ಸಂಘದ ವಾರ್ಷಿಕ ಮಹಾಸಭೆ**

ವಿದ್ಯಾ ಸಂಘದ ಕಟ್ಟಡದ ಹೊರಗೆ ಬಿರುಸಿನ ಚುನಾವಣೆ ನಡೆಯುತ್ತಿದ್ದರೆ. ಕಟ್ಟಡದೊಳಗೆ ಗುಡುಗು ಸಿಡಿಲುಗಳ ಆರ್ಭಟ. ಕುಯ್ಯುಮುಡಿ ಪೂರ್ಣಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ವಾರ್ಷಿಕ ಮಹಾಸಭೆಯಲ್ಲಿ 103 ಠರಾವುಗಳು ಮಂಡಿಸಲ್ಪಟ್ಟು

20ನೇ ಪುಟಕ್ಕೆ

# ಕೊಡಗು ಗೌಡ ವಿದ್ಯಾಸಂಘದ ಆಡಳಿತ ಮಂಡಳಿ ವರದಿ (1995-2000)

ಕೊಡಗು ಗೌಡ ವಿದ್ಯಾ ಸಂಘ 1908 ರಲ್ಲಿ ನಮ್ಮ ಹಿರಿಯರಿಂದ ಸ್ಥಾಪನೆಗೊಂಡು ಗೌಡ ವಿದ್ಯಾರ್ಥಿಗಳ ವಿದ್ಯಾರ್ಜನೆ ಹಾಗೂ ಇನ್ನಿತರ ಜನಾಂಗದ ಬೆಳವಣಿಗೆ ಕಾರ್ಯಕ್ರಮದಲ್ಲಿ ಅಂದಿನಿಂದ ತನ್ನ ಕಾರ್ಯವನ್ನು ಅತಿ ಉತ್ತಮ ರೀತಿಯಲ್ಲಿ ನಡೆಸಿ ಕೊಂಡು ಬರುತ್ತಿದೆ ಎಂದು ನಾವಿಲ್ಲಿ ಹೇಳಿದರೆ ಅತಿಶಯೋಕ್ತಿ ಯಾಗಲಾರದು ಎಂದು ಭಾವಿಸುತ್ತೇವೆ. ಸಂಘದ ಸ್ಥಾಪಕ ಅಧ್ಯಕ್ಷರಾಗಿದ್ದಂತಹ ದಿವಂಗತ ಕುಂಬುಗೌಡನ ಕುಶಾಲಪ್ಪನವರಿಂದ ಮೊದಲ್ಗೊಂಡು ದಿವಂಗತ ಕುದುಪಜೆ ಕೃಷ್ಣಪ್ಪನವರ ಆಡಳಿತಾವಧಿಯವರೆಗೆ ಸಂಘವು ಕೈಗೊಂಡ ಅತ್ಯುತ್ತಮ ಕಾರ್ಯ ಕ್ರಮಗಳ ಸ್ಥೂಲ ಪರಿಚಯ ಹೆಚ್ಚಿನ ಸದಸ್ಯರಿಗೆ ಇದೆ ಎಂದು ಭಾವಿಸುತ್ತೇವೆ. 1995ನೇ ಇಸವಿಯಲ್ಲಿ ಸಂಘದ ವಾರ್ಷಿಕ ಮಹಾಸಭೆಯನ್ನು ನಡೆಸಿದ ನಂತರ ಮಹಾಸಭೆಯಲ್ಲಿ ಶ್ರೀಮಾನ್ ಕುಯ್ಯಮುಡಿ ಕೆ. ಪೂರ್ಣಯ್ಯನವರ ಅಧ್ಯಕ್ಷತೆಯಲ್ಲಿ ಈ ಕೆಳಗಿನ ಸದಸ್ಯರುಗಳು ಆಡಳಿತ ಮಂಡಳಿಯ ನಿರ್ದೇಶಕರುಗಳಾಗಿ ನೇಮಕಗೊಂಡವು.

ಶ್ರೀ ಪಂಜಿಪ್ಪಳ ವೆಂಕಪ್ಪ ಉಪಾಧ್ಯರು, ಶ್ರೀ ಕೋಳಿ ಮುಡಿಯನ ಅನಂತಕುಮಾರ್ ಗೌರವ ಕಾರ್ಯದರ್ಶಿ, ಶ್ರೀಮತಿ ಕೂಡಕಂಡಿ ಕಾವೇರಮ್ಮ ಖಜಾಂಚಿ, ಶ್ರೀ ಸೂರ್ತಲೆ ಆರ್. ಸೋಮಣ್ಣ, ಶ್ರೀ ಕೋಡಿ ನಂಜುಂಡ, ಡಾ. ಕೀಲಾರು ಸೂರ್ಯ ಕುಮಾರ, ಶ್ರೀ ಬಾರಿಕೆ ಪೂಣಚ್ಚ, ಶ್ರೀ ಮಂಡೀರ ದೇವಯ್ಯ, ಶ್ರೀ ಚೀಯಂಡಿ ಯಾದವ, ಶ್ರೀ ಪಟ್ಟಡ ಪ್ರಭಾಕರ, ಶ್ರೀಮತಿ ದಿ. ಮೊಟ್ಟೇರ ಜಗದೀಶ್, ಶ್ರೀ ಬಾಳಾಡಿ ಉತ್ತಯ್ಯ, ಪಂಜಿಪಳ್ಳ ಇಂದ್ರಾಕ್ಷಿ, ಶ್ರೀಮತಿ ಯಾಲದಾಳು ಸಾವಿತ್ರಿಯೂ ನಿರ್ದೇಶಕರುಗಳಾಗಿ, ಶ್ರೀ ಪಾಡಿಚಟ್ಟೆ ಉತ್ತಪ್ಪ ಕಾನೂನು ಸಲಹೆಗಾರರಾಗಿಯೂ, ಶ್ರೀ ಮೂಟೆ ಚುಗಪ್ಪ ಲೆಕ್ಕ ಪರಿಶೋಧಕರಾಗಿಯೂ, ಶ್ರೀ ಚೆಟ್ಟಿಮಾಡ ರಘುಪತಿ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

1995ರ ಮಹಾಸಭೆಯ ನಂತರ ಬಂದ ಈ ಆಡಳಿತ ಮಂಡಳಿಯು ಈ 5ವರ್ಷಗಳಲ್ಲಿ ಕೈಗೊಂಡ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಈ ವರದಿ ವಾಚನದಲ್ಲಿ ತಮ್ಮಗಳ ಮುಂದೆ ಇಡಲು ಇಚ್ಚಿಸುತ್ತಿದ್ದೇವೆ.

1. ವಿದ್ಯಾಸಂಘದ ಕಟ್ಟಡಕ್ಕೆ ರಸ್ತೆಯಿಂದ ಒಂದು ದ್ವಾರವಿದ್ದು ಈ ದ್ವಾರದಿಂದ ಬರುವ ವಾಹನಗಳಿಗೆ ಹೊರ ಹೋಗಲು ವ್ಯವಸ್ಥೆ ಮಾಡುವ ಉದ್ದೇಶಕ್ಕಾಗಿ ಕಲ್ಲು ಹಾಸಿನ ರಸ್ತೆ ನಿರ್ಮಿಸಲಾಗಿದೆ. ಈ ಕಾರ್ಯಕ್ಕೆ ಶ್ರೀ ಪುಳಕಂಡರ ಮುತ್ತಪ್ಪ, ಮರಗೋಡು ಇವರು ರೂ. 1000-00 ಧನ ಸಹಾಯ ನೀಡಿರುವುದಾಗಿದೆ.

2. ಈ ಹಿಂದಿನ ಮಹಾಸಭೆಯಲ್ಲಿ ಸದಸ್ಯರು ಒಮ್ಮತದ ಅಭಿಪ್ರಾಯ ವ್ಯಕ್ತ ಪಡಿಸಿದ ಮೇಲೆ 1995-96ರಲ್ಲಿ ನಿರ್ಣಯ ವೊಂದನ್ನು ಕೈಗೊಂಡು ಈ ಹಿಂದಿನ ಸದಸ್ಯತನ ಮೊತ್ತ ರೂ. 51-00ನ್ನು ರೂ. 101-00 ಕ್ಕೆ ಏರಿಸಿದ್ದು, ಹಲವು ಸದಸ್ಯರು ಇದನ್ನು ರೂ. 101-00ಕ್ಕೆ ಹೆಚ್ಚಿಸಿಕೊಂಡಿರುವುದಾಗಿದೆ. ಹಾಗೆಯೇ ಈ ದಿವಸವೂ ಹಲವು ಸದಸ್ಯರು ತಮ್ಮ ಸದಸ್ಯತನ ಮೊತ್ತವನ್ನು ರೂ. 101-00ಕ್ಕೆ ಏರಿಸಿಕೊಂಡು ಸಹಕರಿಸಿರುತ್ತಾರೆ.

3.ನಮ್ಮ ಸಂಘದ ಕಟ್ಟಡದಲ್ಲಿ ನಡೆಯುವ ಮದುವೆ ಸಮಾರಂಭಗಳಿಗೆ ನೀರಿನ ಕೊರತೆ ಉಂಟಾಗುವುದನ್ನು ಗಮನಿಸಿ ಸಮಗ್ರ ನೀರಿನ ವ್ಯವಸ್ಥೆ ಕಲ್ಪಿಸುವ ಬಗ್ಗೆ ನಾವುಗಳು ಆಡಳಿತ ಮಂಡಳಿ ಮೀಟಿಂಗಿನಲ್ಲಿ ಚರ್ಚಿಸಿ ಅತ್ಯಂತ ಶೀಘ್ರ ಈ ಕಾರ್ಯವನ್ನು ಕೈಗೊಳ್ಳುವಂತೆ ತೀರ್ಮಾನಿಸಿದೆವು. ಈ ಕಾರ್ಯಕ್ಕಾಗಿ ಜಿಲ್ಲೆಯ ನಮ್ಮ ಜನಾಂಗದ ಹಲವು ಉದಾರಿಗಳ ಮನೆಗಳಿಗೆ ನಾವುಗಳು ಹೋಗಿ ಅವರ ಸಹಕಾರವನ್ನು ಕೋರಿ ರೂ. 36,100-00 ರಷ್ಟು ಸಹಾಯಧನ ಪಡೆದೆವು. ಈ ಮೊತ್ತವನ್ನು ಉಪಯೋಗಿಸಿ ಸಂಘದ ಉಳಿತಾಯದ ಮೊತ್ತದಿಂದ ಮದುವೆ ಕಾರ್ಯಕ್ಕೆ ಅಗತ್ಯವಿರುವಂತೆ ಒಂದು ವಿದ್ಯುತ್ ಚಾಲಿತ ಕೊಳವೆ ಬಾವಿಯನ್ನು ತೆರೆದು ವಿದ್ಯುತನ್ನು ಅಳವಡಿಸಿ ನೀರಿನ ವ್ಯವಸ್ಥೆಯನ್ನು ಸಮರ್ಪಕವಾಗಿ ನಿರ್ವಹಿಸಿರುತ್ತೇವೆ. ಅದೇ ರೀತಿಯಲ್ಲಿ ನೀರನ್ನು ದಾಸ್ತಾನು ಇಡಲು ಈ ಹಿಂದಿನ ನೀರಿನ ಟ್ಯಾಂಕು ಉತ್ತಮ ಮಟ್ಟದಲ್ಲಿ ಇಲ್ಲದ್ದನ್ನು ಮನಗಂಡು ಉತ್ತಮ ಮಟ್ಟದ ನೀರಿನ ಟ್ಯಾಂಕೊಂದನ್ನು ನಿರ್ಮಿಸಿದ್ದೇವೆ. ನೀರಿನ ಟ್ಯಾಂಕಿನಿಂದ ಬರುವ ನೀರಿನಿಂದ ಮದುವೆ ಊಟ ಮಾಡಿದ ನಂತರ ಕೈ ತೊಳೆಯುವ ಅಗತ್ಯಕ್ಕಾಗಿ 10 ನಲ್ಲಿಗಳಿರುವ ಒಂದು ಉತ್ತಮ ವಾಷಿಂಗ್ ಬೇಶಿನ್‌ನನ್ನು ನಿರ್ಮಿಸಿದ್ದೇವೆ.

4. ಸಮಾರಂಭಗಳಲ್ಲಿ ಅಡುಗೆಗೆ ಕೊರತೆ ಇದ್ದ ಅಡುಗೆ ಪಾತ್ರೆಯನ್ನು ಅಗತ್ಯವಿದ್ದಷ್ಟು ಖರೀದಿ ಮಾಡಿದ್ದೇವೆ ಹಾಗೂ ಅಡುಗೆ ಕೋಣೆಯಲ್ಲಿರುವ ಅಡುಗೆ ಒಲೆಗಳನ್ನು ಹೊಸದಾಗಿ ನಿರ್ಮಿಸಿದ್ದೇವೆ.

5. 1994-95ರಲ್ಲಿ 21 ಗೌಡ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಒಟ್ಟು ರೂ. 15,100-00ರ ಪ್ರೋತ್ಸಾಹ ದಾಯಕ ವಿದ್ಯಾರ್ಥಿವೇತನ ನೀಡಿ ಗೌರವಿಸಿರುತ್ತೇವೆ. ಹಾಗೆಯೇ ಪ್ರತೀ ವರ್ಷ ವಿದ್ಯಾರ್ಥಿ ವೇತನ ನೀಡುವ ಸಮಾರಂಭಗಳಿಗೆ ಮುಖ್ಯ ಅತಿಥಿಗಳಾಗಿ ಉದಾರ ವಿದ್ಯಾರ್ಥಿವೇತನ ನಿಧಿ ನೀಡಿದ ದಾನಿಗಳನ್ನು ಜೇಷ್ಠತೆ ಆಧಾರದ ಮೇಲೆ ಪ್ರತೀ ವರ್ಷ ಮೂರು ಮಂದಿ ಅತಿಥಿಗಳಂತೆ ಆಹ್ವಾನಿಸಿ ಅವರಿಂದ ವಿದ್ಯಾರ್ಥಿವೇತನ ನೀಡುವಂತೆ ತೀರ್ಮಾನಿಸಿ ಅದರಂತೆ ನಡೆದುಕೊಂಡು ಬಂದಿದ್ದೇವೆ.

6. ಸಂಘದ ಕಟ್ಟಡದಲ್ಲಿ ನಡೆಯುವ ಮದುವೆ ಹಾಗೂ ಇತರೇ ಸಮಾರಂಭಗಳಲ್ಲಿ ಕುಳಿತು ಊಟ ಮಾಡಲು ಇರುವ ಅನಾನುಕೂಲತೆಯನ್ನು ಗಮನಿಸಿ ಊಟಕ್ಕೆ ಉಪಯೋಗಿಸಲಾಗುತ್ತಿದ್ದ ಮರದ ಬೆಂಚುಗಳನ್ನು ತೆಗೆದು ರೂ. 56,744-00 ಮೊತ್ತದ ಖರ್ಚಿನಲ್ಲಿ ಉತ್ತಮವಾದ ಸಿಮೆಂಟಿನ ಬೆಂಚನ್ನು ನಿರ್ಮಿಸಿದ್ದೇವೆ.

7. 1996 ಫೆಬ್ರವರಿ 14ರಂದು ಸುಳ್ಯದಲ್ಲಿ ನಡೆದ ಗೌಡ ಜನಾಂಗದ ಬೃಹತ್ ಸಮ್ಮೇಳನಕ್ಕೆ ಕೊಡಗು ಗೌಡ ಜನಾಂಗದವರನ್ನು ಭಾಗವಹಿಸಲು ಪ್ರೇರೇಪಿಸುವುದರೊಂದಿಗೆ ನಮ್ಮ ಸಾಂಸ್ಕೃತಿಕ

ಬದುಕನ್ನು ಬಿಂಬಿಸುವ ಒಂದು ಉಡುಪಿನ ತಂಡವನ್ನು ಗಾಳಿಬೀಡು ಸ್ವಜಾತಿ ಯುವ ಜನಾಂಗವನ್ನು ಕೊಂಡೊಯ್ದು ಭಾಗವಹಿಸಿ ದಕ್ಷಿಣ ಕನ್ನಡ ಜಿಲ್ಲೆಯ ಜನರ ಮೆಚ್ಚುಗೆ ಪಡೆದಿದ್ದೇವೆ.

8. ಸಂಘದ ಕಟ್ಟಡ ಆವರಣವನ್ನು ಬಂದೋಬಸ್ತು ಮಾಡುವ ಉದ್ದೇಶದಿಂದ ಮುಖ್ಯ ದ್ವಾರದವರೆಗೆ ಅಂದಾಜು 300 ಅಡಿಯಷ್ಟು ಉದ್ದ ಉತ್ತಮವಾದ ಸಿಮೆಂಟು ಗೋಡೆಯನ್ನು ಕಟ್ಟಿರುತ್ತೇವೆ. ಹಾಗೆಯೇ ಉಳಿದ ಆವರಣವನ್ನು ತಂತಿ ಬೇಲಿಯನ್ನು ನಿರ್ಮಿಸಿ ಬಂದೋಬಸ್ತುಗೊಳಿಸಿದ್ದು ಇತರರು ಸಂಘದ ಜಾಗವನ್ನು ಆಕ್ರಮಿಸದಂತೆ ವ್ಯವಸ್ಥೆ ಮಾಡಿರುತ್ತೇವೆ.

9. 1995-96ನೇ ಸಾಲಿನಲ್ಲಿ ಒಟ್ಟು 22 ಮಂದಿ ಜನಾಂಗದ ಪ್ರತಿಭಾನ್ವಿತ ಗೌಡ ವಿದ್ಯಾರ್ಥಿಗಳಿಗೆ ಒಟ್ಟು ರೂ. 13,200-00 ಪ್ರೋತ್ಸಾಹದಾಯಕ ವಿದ್ಯಾರ್ಥಿವೇತನ ನೀಡಿ ಪುರಸ್ಕರಿಸಿದ್ದೇವೆ.

10. 1995ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ರಾಷ್ಟ್ರೀಯ ಆಯೋಗವೂ ಹಿಂದುಳಿದ ಪಂಗಡಗಳಿಗೆ ಮೀಸಲಾತಿ ನೀಡುವ ಉದ್ದೇಶದಿಂದ ಅರ್ಜಿಗಳನ್ನು ಆಹ್ವಾನಿಸಿದ್ದನ್ನು ಮನಗಂಡು ನಾವುಗಳು ಈ ಬಗ್ಗೆ ಕೂಲಂಕುಶವಾಗಿ ಚರ್ಚಿಸಿ ಸಂಘದ ಸದಸ್ಯರಾದ ಶ್ರೀಮಾನ್ ಸೂದನ ನಾಣಯ್ಯ ಹಾಗೂ ಕೂಡಕಂಡಿ ಸೋಮಣ್ಣ ಇವರ ಶ್ರಮವನ್ನು ಪಡೆದುಕೊಂಡು ನಮ್ಮ ಜನಾಂಗದ ಅಂಕಿ-ಅಂಶಗಳನ್ನು ಒಳಗೊಂಡ ವರದಿಯನ್ನು ಆಯೋಗಕ್ಕೆ ಒಪ್ಪಿಸಿದ್ದೇವೆ.

11.1996ನೇ ಸಾಲಿನಲ್ಲಿ ಜಿಲ್ಲಾಡಳಿತ ನಡೆಸಿದ ಕೊಡಗು ಉತ್ಸವದಲ್ಲಿ ನಮ್ಮ ವಿದ್ಯಾ ಸಂಘದ ವತಿಯಿಂದ ಹಲವು ಕಾರ್ಯಕ್ರಮವನ್ನು ನೀಡಿ ಕೊಡಗು ಜಿಲ್ಲಾಧಿಕಾರಿಗಳಿಂದ ಪ್ರಶಂಸನಾ ಪತ್ರ ಪಡೆದಿದ್ದೇವೆ.

12. ನಮ್ಮ ಸಂಘದ ಕಟ್ಟಡಕ್ಕೆ ಪ್ರವೇಶಿಸುವ ಹಾದಿಗೆ ಒಂದು ಪ್ರವೇಶದ್ವಾರ ಮಾತ್ರವಿದ್ದು ಇದರಿಂದ ಬಂದು ಹೋಗುವ ವಾಹನಗಳಿಗೆ ತೊಂದರೆ ಉಂಟಾಗುತ್ತಿದ್ದು ಏಕಮುಖ ಮಾರ್ಗದ ವ್ಯವಸ್ಥೆ ಮಾಡಲು ನಿರ್ಮಿಸಿದ ಕಲ್ಲು ಹಾಸಿನ ರಸ್ತೆಯ ಅಂಚಿಗೆ ಒಂದು ದೊಡ್ಡದಾದ ಕಬ್ಬಿಣದ ಗೇಟನ್ನು ನಿರ್ಮಿಸುವುದು ಸೂಕ್ತವೆಂದು ಅಭಿಪ್ರಾಯಿಸಿ ದಾನಿಗಳನ್ನು ಕೋರಿದಾಗ ಶ್ರೀಮತಿ ಕೊಡೆಕಲ್ಲು ಚಂದ್ರಶೇಖರಿ ಅವರು ಅವರ ದಿವಂಗತ ಪತಿ ಕೊಡೆಕಲ್ಲು ಪೂಣಚ್ಚ ಇವರ ಜ್ಞಾಪಕಾರ್ಥ ಉದಾರ ಧನ ಸಹಾಯ ರೂ. 12,000-00ವನ್ನು ನೀಡಿರುವುದಾಗಿದೆ. ಈ ಮೊತ್ತದಿಂದ ಉತ್ತಮವಾದ ಗೇಟನ್ನು ನಿರ್ಮಿಸಿದ್ದೇವೆ.

13. 1997 ನೇ ಸಾಲಿನಲ್ಲಿ ಒಟ್ಟು 21ಮಂದಿ ನಮ್ಮ ಜನಾಂಗದ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಒಟ್ಟು ರೂ. 14,000-00 ಮೊತ್ತದ ಪ್ರೋತ್ಸಾಹದಾಯಕ ವಿದ್ಯಾರ್ಥಿ ವೇತನವನ್ನು ನೀಡಿ ಗೌರವಿಸಿರುತ್ತೇವೆ.

14. ದಿನಾಂಕ 23-11-1997ರಂದು ನಮ್ಮ ಸಂಘದ ಕಟ್ಟಡದಲ್ಲಿ ನಡೆದ ನಮ್ಮ ಕುಲಬಾಂಧವರ ವಿವಾಹ ಸಮಾರಂಭದಲ್ಲಿ ಕೆಲವು ಕಿಡಿಗೇಡಿಗಳು ಗಲಾಟೆಯನ್ನು ಎಬ್ಬಿಸಿ ಸಂಘದ ಕಟ್ಟಡದ ಹೆಚ್ಚಿನ ಕಿಟಿಕಿ ಹಾಗೂ ಬಾಗಿಲುಗಳಿಗೆ ಕತ್ತಿಯಿಂದ ಹಲ್ಲೆ ನಡೆಸಿ ಅಪಾರ ನಷ್ಟವನ್ನುಂಟು ಮಾಡಿರುವುದಾಗಿದೆ. ಈ ಬಗ್ಗೆ ಪೋಲೀಸ್ ಮೊಕದ್ದಮೆ ದಾಖಲು ಮಾಡಲಾಗಿದ್ದು ಪೋಲೀಸ್ ಸಂಪೂರ್ಣ ಸಹಕಾರ ನೀಡಿ ಆರೋಪಿಗಳನ್ನು ಬಂಧಿಸಿರುವುದಾಗಿದೆ. ಪ್ರಕರಣ ಈಗ ನ್ಯಾಯಾಲಯದಲ್ಲಿ ಇತ್ಯರ್ಥವಾಗಿ ರೂ. 6,000/- ವಸೂಲಿ ಮಾಡಿ ಸಂಘಕ್ಕೆ ಜಮಾ ಆಗಿದೆ.

15. 1998ನೇ ಸಾಲಿನಲ್ಲಿ ಸಂಘದ ವತಿಯಿಂದ ಒಂದು ನರ್ಸರಿ ಶಾಲೆಯನ್ನು ತೆರೆದು ಒಂದು ವರ್ಷಕಾಲ ನಡೆಸಿದ್ದೇವೆ. ಆದರೆ ಈ ಶಾಲೆಗೆ ಅಗತ್ಯದಷ್ಟು ಮಕ್ಕಳು ಲಭ್ಯವಿಲ್ಲದ ಕಾರಣ ಹಾಗೂ ಶಾಲೆ ನಷ್ಟದಲ್ಲಿ ನಡೆದುದರಿಂದ ಈ ಶಾಲೆಯನ್ನು ಮುಚ್ಚಬೇಕಾಯಿತು.

16. 1998ನೇ ಸಾಲಿನಲ್ಲಿ ಒಟ್ಟು 22 ಮಂದಿ ಗೌಡ ಜನಾಂಗದ ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಿದ್ದೇವೆ.

17. ಸಂಘದ ಕಟ್ಟಡದಲ್ಲಿ ನಡೆಯುವ ಮದುವೆ ಕಾರ್ಯಕ್ಕೆ ಅಗತ್ಯವಿರುವ ಬೇಡಿಕೆಯನ್ನು ಗಣನೆಗೆ ತೆಗೆದುಕೊಂಡು ಅಗತ್ಯದ ಹೆಚ್ಚಿನ ಎಲ್ಲಾ ಪಾತ್ರೆಗಳನ್ನು ಖರೀದಿ ಮಾಡಿದ್ದೇವೆ. ಹಾಗೆಯೇ ಕುಳಿತುಕೊಳ್ಳುವ ವ್ಯವಸ್ಥೆ ಸಾಧಾರಣತೆಗಾಗಿ ಸುಮಾರು 200 ಫೈಬರ್ ಕುರ್ಚಿಗಳನ್ನು ಖರೀದಿ ಮಾಡಿದ್ದೇವೆ.

18. ವಿದ್ಯಾರ್ಥಿ ನಿಧಿ ವೇತನವನ್ನು ಈ ಐದು ವರ್ಷಗಳಲ್ಲಿ ರೂ. 1,79,996-00 ರಿಂದ ರೂ. 2,08,000-00ಕ್ಕೆ ಏರಿಸಿದ್ದೇವೆ.

19. 1995ರ ಮಹಾಸಭೆಯಲ್ಲಿ ನಮ್ಮ ಸದಸ್ಯರು ಸದಸ್ಯತನ ಶುಲ್ಕ ರೂ. 51/- ಇದ್ದುದನ್ನು ರೂ. 101ಕ್ಕೆ ಏರಿಸುವಂತೆ ತೀರ್ಮಾನಿಸಿದ ಮೇಲೆ ಮಹಾಸಭೆಯ ನಂತರ 15-6-1995 ರಂದು ಪ್ರಥಮ ಆಡಳಿತ ಮಂಡಳಿ ಸಭೆಯಲ್ಲಿ ರೂ. 101-00ಕ್ಕೆ ಏರಿಸುವಂತೆ ತೀರ್ಮಾನಿಸಿ ರೆಕಾರ್ಡು ಮಾಡಿರುತ್ತೇವೆ.

20. ಪ್ರತೀ ವರ್ಷವೂ ಆಗಿಂದಾಗ್ಗೆ ನಮ್ಮ ಸಂಘದ ಮೈಸೂರು ಶಾಖೆಗೆ ಭೇಟಿ ನೀಡಿ ಆಡಳಿತ ಮಂಡಳಿ ಸಭೆಗಳನ್ನು ಅಲ್ಲಿಯೇ ನಡೆಸಿ ಅಲ್ಲಿಯ ಅಗತ್ಯತೆಗಳನ್ನು ಖುದ್ದು ಪರಿಶೀಲಿಸಿದ್ದೇವೆ ಹಾಗೆಯೆ ಅಲ್ಲಿ ಸಿಮೆಂಟಿನಿಂದ ಒಂದು ದೊಡ್ಡದಾದ ಕಸದ ತೊಟ್ಟಿಯನ್ನು ನಿರ್ಮಿಸಿದ್ದೇವೆ. ಹಲವು ವರ್ಷಗಳಿಂದ ಹೊಸ ಕಟ್ಟಡ ನಿರ್ಮಾಣಕ್ಕೆ ಹಾಕಿ ನಿಲ್ಲಿಸಿದ್ದ ಅಡಿಪಾಯವನ್ನು ಪರಿಶೀಲಿಸಿ ಹಾಗೂ ಮೈಸೂರಿನ ಜನಾಂಗ ಬಾಂಧವರಿಂದ ಕಟ್ಟಡದಲ್ಲಿ ಸಮಾರಂಭಗಳನ್ನು ನಡೆಸಲು ಒಂದು ಸುಸಜ್ಜಿತ ಅಡುಗೆ ಕೋಣೆಯ ಅಗತ್ಯವಿರುವುದಾಗಿ ಬಂದ ಕೋರಿಕೆಯನ್ನು ಪರಿಗಣಿಸಿ ಅಲ್ಲಿಯ ಉಸ್ತುವಾರಿ ಸಮಿತಿ ಸಹಕಾರದಲ್ಲಿ ಸುಮಾರೂ ರೂ. 1,50,000-00 ವೆಚ್ಚದಲ್ಲಿ ಒಂದು ಅಡುಗೆ ಮನೆಯನ್ನು ಉತ್ತಮ ಮಟ್ಟದಲ್ಲಿ ನಿರ್ಮಿಸಿದ್ದೇವೆ. ಅದೇ ರೀತಿಯಲ್ಲಿ ಮೈಸೂರಿನ ಕಟ್ಟಡಕ್ಕೆ ಸುಣ್ಣ ಬಣ್ಣ ಬಳಿಯುವುದರೊಂದಿಗೆ

20ನೇ ಪುಟಕ್ಕೆ

## ಸಂಗಾತಿ ಭವಿಷ್ಯ : ನವೆಂಬರ್ 16 ರಿಂದ 30, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

ಮೇಷ ರಾಶಿ : ದೈವಾನುಗ್ರಹವಿದೆ. ಗೃಹವಲಯದಲ್ಲಿ ಲಗ್ನ ಕಾರ್ಯಗಳು ನೆರವೇರಬಹುದು. ಸರಕಾರಿ ಅಧಿಕಾರಿಗಳಿಂದ ಒಳ್ಳೆಯವರೆನಿಸಿ ಕೊಳ್ಳುತ್ತೀರಿ. ಹಣಕಾಸಿನ ವ್ಯವಹಾರದಲ್ಲಿ ಸಾಧಾರಣ ಫಲ ಸಿಗುವುದು. ಆರೋಗ್ಯದ ಕಡೆ ಗಮನವಿಡಿ.

ವೃಷಭರಾಶಿ : ಗೃಹವಲಯದಲ್ಲಿ ಸಾಧಾರಣ ನೆಮ್ಮದಿ ಇರುವುದು, ಹೊಸ ಭೂ ಸಂಬಂಧ ವಿಷಯ ಪ್ರಸ್ತಾಪಿಸಲ್ಪಡುವುದು. ಪರರಿಂದ ನಿಂದನೆಗೆ ಒಳಗಾಗುವಿರಿ. ಗುರುಬಲವಿರುವುದರಿಂದ ಅಪಾಯದಿಂದ ಪಾರಾಗುವಿರಿ. ನವಗ್ರಹಾರಾಧನೆ ಮಾಡಿ.

ಮಿಥುನ ರಾಶಿ : ಶತ್ರುಗಳ ಉಪಟಳ ಹೆಚ್ಚಾಗುವುದು. ಭೂ ಸಂಬಂಧವಾಗಿ ಮಾಂತ್ರಿಕ ವಿದ್ಯೆಯಿಂದ ನಷ್ಟವಿದೆ. ಅವಮಾನ ಕ್ಕೊಳಗಾಗುವಿರಿ. ಮನೆ ಬಿಟ್ಟು ಹೋಗುವ ಸಂದರ್ಭವಿದೆ.

ಕರ್ಕಾಟಕ ರಾಶಿ : ಗೃಹವಲಯದಲ್ಲಿ ನೆಮ್ಮದಿ ನೆಲೆಸುವುದು. ಶತ್ರುಗಳು ದೂರ ಸರಿಯುತ್ತಾರೆ. ಕಳೆದುಕೊಂಡು ಪ್ರೀತಿ ವಿಶ್ವಾಸ ಮತ್ತೆ ಶಾಶ್ವತವಾಗುವುದು. ದೇವತಾ ಕ್ಷೇತ್ರಗಳಿಗೆ ತೀರ್ಥಯಾತ್ರೆ ಮಾಡುವ ಯೋಗವಿದೆ. ಹಣಕಾಸಿನ ವ್ಯವಹಾರದಲ್ಲಿ ಉತ್ತಮವಿದೆ.

ಸಿಂಹರಾಶಿ : ಪಿತೃವಿನಿಂದ ಒಳ್ಳೆಯ ಆಶೀರ್ವಾದ ದೊರೆಯುತ್ತದೆ. ಲಕ್ಷ್ಮಿಯು ಕೈ ಸೇರುವುದು. ಉದ್ಯೋಗದಲ್ಲಿ ಬಡ್ತಿ ಹೊಂದುವ ಯೋಗವಿದೆ. ಒಟ್ಟಾರೆ ಲಕ್ಷ್ಮಿ ನಿಮ್ಮನ್ನು ಕಣ್ಣು ಬಿಟ್ಟು ನೋಡುವ ಸುಸಂದರ್ಭ.

ಕನ್ಯಾರಾಶಿ : ಉದ್ಯೋಗ ವ್ಯವಹಾರದಲ್ಲಿ ಬಡ್ತಿ ಹೊಂದುವಿರಿ. ಹೊಸ ವಾಹನ ಖರೀದಿ ಯೋಗವಿದೆ. ದೇವತಾ ಕಾರ್ಯ ಮಾಡಲು ಯೋಚಿಸುತ್ತಿರಿ. ಜಾಗೃತೆಯಿಂದ ವ್ಯವಹಾರ ಮಾಡಿದರೆ ಎಲ್ಲಾ ಸುಗಮವಾಗುವುದು.

ತುಲಾರಾಶಿ : ಗೃಹವಲಯದಲ್ಲಿ ನೆಮ್ಮದಿ ಇಲ್ಲ. ದೈವಾನುಕೂಲವಿಲ್ಲ. ಹಣಕಾಸಿನ ವ್ಯವಹಾರದಲ್ಲಿ ಏರುಪೇರಾಗುವುದು. ಮಿತ್ರರೇ ಶತ್ರುಗಳಾಗುವರು. ಆರೋಗ್ಯ ಹದಗೆಡುವ ಸಂಭವವಿದೆ. ಗಣಪತಿಯನ್ನು ಆರಾಧಿಸಿ.

ವೃಶ್ಚಿಕ ರಾಶಿ : ದೈವಾನುಕೂಲವಿದೆ. ಹಣಕಾಸಿನ ವ್ಯವಹಾರದಲ್ಲಿ ನೆಮ್ಮದಿ. ಸ್ತ್ರೀಯರ ಜೊತೆ ವ್ಯವಹರಿಸಿ ಅವಮಾನಿತರಾಗುವಿರಿ. ಸಂಸಾರದಲ್ಲಿ ನಿಷ್ಠುರಕ್ಕೊಳಗಾಗುವಿರಿ. ನಾಗಾರಾಧನೆ ಮಾಡಿಕೊಂಡು ಬಂದಲ್ಲಿ ಸುಖ.

ಧನಸ್ಸು ರಾಶಿ : ಗುರುಗ್ರಹದ ದೋಷದಿಂದ ಲಗ್ನಕಾರ್ಯಗಳಲ್ಲಿ ಅಡ್ಡಿ ಬರಬಹುದು. ಆರೋಗ್ಯವು ಹದಗೆಡಬಹುದು. ಮನಸ್ಸಿನಲ್ಲಿಟ್ಟುಕೊಂಡ ವ್ಯವಹಾರ ಕೈಗೂಡುವುದು ಅಸಾಧ್ಯ. ಹಣಕಾಸು ಸಾಧಾರಣವಾಗಿ ಕೈಗೂಡುವುದು.

ಮಕರ ರಾಶಿ : ದೇವತಾನುಗ್ರಹವಿದೆ. ಹಣಕಾಸು ವ್ಯವಹಾರದಲ್ಲಿ ಉತ್ತಮವಿದೆ. ವಾಹನ ಖರೀದಿ ಯೋಗವಿದೆ. ಶತ್ರುಗಳು ಮಿತ್ರರಾಗುವರು. ಎಲ್ಲಾ ರಂಗದಲ್ಲಿ ಯಶಸ್ಸು ನಿಮ್ಮ ಪಾಲಿನದಾಗುತ್ತದೆ.

ಕುಂಭ ರಾಶಿ : ದೈವಾನುಕೂಲವಿಲ್ಲ. ನಿಮ್ಮ ಸಂಸಾರವೇ ನಿಮಗೆ ನಿಷ್ಠುರ. ಹಣಕಾಸಿನ ವ್ಯವಹಾರದಲ್ಲಿ ನಷ್ಟ ಅನುಭವಿಸುವಿರಿ. ಶತ್ರುಗಳು ಹಿಂದೇಟು ಹಾಕುವರು. ಶನಿಯನ್ನು ಆರಾಧಿಸಿ.

ಮೀನ ರಾಶಿ : ಆರೋಗ್ಯದ ಕಡೆ ನಿಗಾ ವಹಿಸಿ ಸಂಸಾರದ ಹೊರೆ ನಿಮ್ಮ ಮೇಲಿದೆ. ಕಷ್ಟಪಟ್ಟು ದುಡಿತಕ್ಕೆ ತಕ್ಕ ಫಲ ಕಾಣುವಿರಿ. ಹಣಕಾಸಿನ ವ್ಯವಹಾರದಲ್ಲಿ ತುಸು ನೆಮ್ಮದಿ. ದೇವತಾರಾಧನೆ ಮಾಡಿರಿ.

*"ಮಂತ್ರ, ತೀರ್ಥ, ದ್ವಿಜೆ, ದೇವೆ, ದೇವಜ್ಞ, ಬೇಸಜೆ, ಗುರು, ಯದ್ರುಶಿ, ಬಾವನಯಶ್ಯ, ಸಿದ್ಧಿರ್ಭವತಿ. ತಾದ್ರುಸಿ"- ಮಂತ್ರದಲ್ಲಿ, ತೀರ್ಥದಲ್ಲಿ, ಬ್ರಾಹ್ಮಣನಲ್ಲಿ, ದೇವರಲ್ಲಿ, ಜ್ಯೋತಿಷ್ಯರಲ್ಲಿ, ಗುರುವಿನಲ್ಲಿ ಯಾರಿಗೆ ಅತ್ಯುತ್ತಮವಾದ ಭಕ್ತಿ ಇರುವುದೋ ಅಂತವರಿಗೆ ಸಕಲ ಕಾರ್ಯಗಳಲ್ಲಿ ಯಶಸ್ಸು ಲಭಿಸುವುದು.*

---

## ಶುಭವಿವಾಹ

- ಮೈಸೂರು ನಿವಾಸಿ ಬಾಳೇಡಿ ಉತ್ತಯ್ಯನವರ ಮಗಳು ಮೀರಳಿಗೂ ಮತ್ತು ಮೈಸೂರು ಸಿದ್ಧಾರ್ಥನಗರದ ನಿವಾಸಿ ಹೆಚ್. ವಿ. ರಾಜುನವರ ಪುತ್ರ ವೀರೇಂದ್ರನಿಗೂ ದಿನಾಂಕ 3-11-2000ದಲ್ಲಿ ಮೈಸೂರಿನ ವಿಶ್ವೇಶ್ವರ ನಗರದ ಚಂದ್ರ ಕಲ್ಯಾಣ ಮಂಟಪದಲ್ಲಿ ಬಾರೀ ಗೌಜ್‌ಲಿ ನಡೆಯಿತು.
- ಮೈಸೂರು ನಿವಾಸಿ ನಾಟೋಳನ ಶ್ರೀಧರನವರ ಮಗ ಸುಜಯ್‌ನಿಗೂ ಮತ್ತು ಬೆಂಗಳೂರು ನಿವಾಸಿ ಕಾಳೇಯಂಡ್ರ ತಮ್ಮಯ್ಯನವರ ಮಗಳು ಸಾಹಿತ್ಯಳಿಗೂ ಕೆಳಗಿನ ಮಡಿಕೇರಿ ಗೌಡ ಕಲ್ಯಾಣ ಮಂಟಪಲಿ ತಾರೀಖ್ 5-11-2000ರ್ಲಿ ನಡೆಯಿತು
- ಬಲಮುರಿ ಗ್ರಾಮದ ಚಿಯಪ್ಪನ ಮಾದಪ್ಪನವರ ಮಗ್ಳು ಭವಾನಿಗೂ ಮತ್ತೆ ಕೋರಂಗಾಲ ಗ್ರಾಮದ ನಂಗಾರು ಸೋಮಪ್ಪನವ್ರ ಮಂಜ ಯುವಕರನಿಗೂ ತಾರೀಶ್ 9-11-2000ರಲ್ಲಿ ಮೂರ್ನಾಡು ಗೌಡ ಸಮಾಜಲಿ ಕಳ್ಳ್.
- ಮೈಸೂರು ನಿವಾಸಿ ಅಯ್ಯೆಟ್ಟಿರ ಗಣಪತಿಯವರ ಪುತ್ರ ವೀರೇಂದ್ರ ಕುಮಾರ್‌ನಿಗೂ ಮತ್ತು ಬಾಡಗ ಗ್ರಾಮದ ಕೈಬಿಲಿ ಪುರುಷೋತ್ತಮನವರ ಮಗಳು ಮಲ್ಲಿಕಾಳಿಗೂ ತಾರೀಖ್ 13-11-2000ರ್ಲಿ ಮಡಿಕೇರಿಯಲ್ಲಿರುವ ಕೆಳಗಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

---

ಆರೋಗ್ಯ ಇಲ್ಲದ ಬಾಳು ಬರಿ ಗೋಳು

# ಆರದ ಗಾಯ : ಕಥೆ

ಒಂದ್ ಊರ್‌ಲಿ ಒಂದ್ ಹೈದ ಇತ್ತ್. ಅವಂಗೆ ಮೂಗ್‌ನ ತುದೀಲೇ ಸಿಟ್ಟ್. ಮನೆಯವಾಗಲಿ, ಸ್ನೇಹಿತರಾಗಲಿ, ಅವಂಗೆ ಸ್ವಲ್ಪ ಎಂತಾರ್ ಹೇಳಿಬುಟ್ಟರೆ ಸಾಕ್ ಅವ್‌ಕೆ ಅವ ತಾರಾಮಾರಾ ಬಾಯಿಗೆ ಬಂದಂಗೆ ಬೈಯ್ಯದು, ಸಿಕ್ಕಿದ್ನ ತೆಗ್ದ್ ಅವರ ತಲೆಗೆ ಹೊಡ್ದ್ ರಂಪ ಮಾಡ್‌ತಿತ್ತ್. ಜನ್ರನ್ನ ಮಾತ್‌ಲೇ ಚುಚ್ಚಿ ಕೀಳಾಗಿ ಕಾಣ್ಬುದುತೇಳಿರೆ ಅವಂಗೆ ಬಾರೀ ಖುಷಿ. ಇದ್ರಂದಾಗಿ ಜನ ಯಾರೂ ವನ್ನ ಇಷ್ಟ ಪಡ್‌ತಿತ್ತ್‌ಲೆ. ಸಭೆ ಸಮಾರಂಭಗಳ್ಲಿ ಅವನ್ನ ಯಾರೂ ಸರಿಯಾಗಿ ಮಾತಡ್ಸಿಕೆ ಹೋಗ್‌ತ್ತಿತ್ತ್‌ಲೆ.

ಒಂದ್ ದಿನ ಅಂವ ಒಂದನೇ ಮಾಡೀಲಿ ನಿತ್ತ್‌ಕಂಡಿರ್ದ್ಯಾಕನ ಮೇಲಿನ ಮಾಡಿಂದ "ಅಣ್ಣಯ್ಯ"ತ್ತೇಳಿ ಯಾರೊ ಕರ್ದಂಗೆ ಆತ್. ಅಂವ ತಲೆ ಎತ್ತಿ ಮೇಲೆ ನೋಡ್‌ಕಾಕನ 'ರಪ್'ತೇಳಿ ಅಂವನ ಮುಖದ ಮೇಲೆ ಎಂತೋ ಬೀತ್. ಅದ್ ಒಂದ್ ದೊಡ್ಡ ಇಟ್ಟಿಗೆ ಚೂರ್. ಅವನ ಎಡ್ದ್ ಕಣ್ಣ್ ಹೊಟ್ಟಿ ಹೋದಷ್ಟ್ ಬ್ಯಾನ್ ಆತ್. ಎರ್ಡ್ ಕಣ್ಣಿಂದನೂ ಬುಳಬುಳತ ನೀರ್ ಹರ್ದ್ ಅಂವ ಕಣ್ಣ್ ಬುಡುಕಾತ್‌ಲೆ. ಕಣ್ದ್‌ಂದ ರಕ್ತ ಬರ್‍ತಾ ಉಟ್ಟ, ನೀರ್ ಸುರಿಯತಾ ಉಟ್ಟತೇಳಿ ಅವಂಗೆ ಗೊತ್ತಾತ್‌ಲೆ. ಅಂವ ತೂರಾಡಿಕಂಡ್ ಮನೆ ಒಳಗೆ ಹೋಕಾಕನ ಅವನ ಅಪ್ಪ ಅವ್ವ ಗಾಭರಿಂದ ಅವನ್ನ ಕರ್‍ಕಂಡ್ ಹೋಗಿ ಅವನ ಕಣ್ಣ್‌ಗೆ ಲಾಯ್ಕ ನೀರ್ ಹಾಕಿ ತೊಳ್ದ್ ಒಳಗೆ ಸೇರಿಕಂಡಿದ್ದ ಹೊಯ್ಗೆನ ತೆಗಿಯಕೆ ಪ್ರಯತ್ನ ಮಾಡಿ ಸೋತ್ ಕೊನೆಗೆ ಅಂವನ ಆಸ್ಪತ್ರೆಗೆ ಕರ್‍ಕಂಡ್ ಹೋಗಿ ಸೇರ್ಸಿದೊ.

ಮತ್ತೆ ಗೊತ್ತಾತ್ ಅವನ ಮುಖಕ್ಕೆ ಇಟ್ಟಿಗೆನ ಬೀಳ್ಸಿದ್ ಒಂದ್ 5 ವರ್ಷದ ಕೂಸ್‌ತ! ಇಂವ ಯಾಗೋ ಒಂದ್ ದಿನ ಆ ಕೂಸ್‌ಗೆ ಅದ್ ಎಂತೋ ಸಣ್ಣ ತಪ್ಪ್ ಮಾಡ್‌ತ್ತೇಳಿ ಸರೀ ಹೊಡ್‌ತ್ತ ಗಡ. ಆ ಸಿಟ್ಟ್‌ನ ಮನ್ಸ್‌ಲಿ ಮಡ್ಕಂಡ ಕೂಸ್ ಅಂವಂಗೆ ಹಂಗೆ ಮಾಡ್ದ್.

ಒಂದ್ ಸಣ್ಣ ಕೂಸ್‌ಗೇ ಅವನ ಮೇಲೆ ಅಷ್ಟ್ ಕೋಪ ಬರುವಂಗೆ ಅಂವ ನಡ್ಕಂಡಿರ್‌ಕಾಕನ, ಇನ್ನ್ ಬೇರೆಯವ್ಕೆ ಹೆಂಗೆ ಇರೊಕು. ಇದ್ನ ಗ್ಯಾನ ಮಾಡ್ದ ಅವನ ಅಪ್ಪ ಅವ್ವಂಗೆ ಚಿಂತೆ ಹತ್ತಿತ್. ಹೆಂಗಾರ್ ಮಾಡಿ ಅವರ ಮಜ್ಣಂಗೆ ಹಂಗೆ ಸಿಟ್ಟ್ ಬಂದ್ ಪ್ರಾಣಿನಂಗೆ ನಡ್‌ಕಂಬದನ್ನ ತಡಿಯಕುತೇಳಿ ಅವನಪ್ಪ ನಿಶ್ಚಯ ಮಾಡಿಕಂಡತ್.

ಆಸ್ಪತ್ರೆಂದ ಚೇತರಿಸಿಕಂಡ್ ಮಜ್ಣ ಮನೆಗೆ ಬಾತ್. ಅವನಪ್ಪ ಅಂವ ಮಲ್ಗಿದ್ದ ಕೊಂಬಾರೆಗೆ ಹೋಗಿ ಅವಂಗೆ ಸಮಾಧಾನ ಮಾಡಿಕಂಡ್ ಅವಂಗೆ ಹೇಳ್ತ್ -"ಸಿಟ್ಟ್ ನಮ್ಮ ಮನಸ್ಸಿನ ದೀಪನ ನಂದಿಸಿದೆ. ಸಿಟ್ಟಲಿ ನಾವ್ ಏನೆಲ್ಲ ಮಾಡುದ್ಲೆ. ಸಿಟ್ಟ್‌ಲಿ ಮನ್ಸ ಅವಂಗೆ ಜನ್ಮ ಕೊಟ್ಟ ಅಪ್ಪಂಗೇ ಒದ್ದದೆ. ಅವ್ವಂಗೆ ಒದ್ದದೆ. ಅಣ್ಣ ತಮ್ಮಂದ್ರ ಗೇ ಚೂರಿ ಹಾಕಿಬುಟ್ಟದೆ. ಮತ್ತೆ ಮನಸ್ಸ್ ಹತೋಟಿಗೆ ಬಂದ ಮ್ಯಾಲೆ ಅಂವನ ದುಡುಕು ಬುದ್ಧಿಗೆ ಪಶ್ಚತ್ತಾಪ ಪಟ್ಟದೆ. ಅದ್ರಿಂದ ನಾವ್ರ ಸಿಟ್ಟ್‌ನ ಹತೋಟಿಲಿಡಿಕೆ ಕಲಿಯಕು." ಮಜ್ಣ ಅಪ್ಪ ಹೇಳ್ದನಲ್ಲಾ ಆಲಿಸಿತ್. "ಅಪ್ಪಾ ನಂಗೂ ಸಿಟ್ಟ್ ಬುಡೊಕುತೇಳಿ ಆಸೆ" ಮಜ್ಣ ಹೇಳ್ತ್. "ಆದ್ರೆ ನನ್ನ ಕೈಲಿ ಆಗ್ತಾ ಇಲ್ಲೆ" ತೇಳಿ ಮಣ್ಣಿ ಹೇಳ್ತ್.

ಆಗ ಅವನಪ್ಪ ಅಂವಂಗೆ ಒಂದ್ ಸಣ್ಣ ಚೀಲದ ತುಂಬಾ ಆಣಿಗಳ್ನ ತಂದ್ ಕೊಟ್ಟ್, ಅವಂಗೆ ಯಾಗ್ಯಾಗ ತುಂಬಾ ಸಿಟ್ಟ್ ಬಂದದೆ, ಆಗ ಒಂದ್ ಆಣಿನ ತಕ್ಕಂಡ್ ಹೋಗಿ ಹಿತ್ತಲ್‌ಲಿದ್ದ ಪಣ್‌ಪುಳಿ ಮರಕ್ಕೆ ಆ ಆಣಿನ ಮುಟ್ಟಿ ತಕ್ಕಂಡ್ ಹೊಡಿಯಕು ತೇಳಿಹೇಳ್ತ್. ಹೈದಂಗೆ ಅಪ್ಪ ಯಾಕೆ ಹಂಗೆ ಹೇಳ್ತ್‌ತೇಳಿ ಹೊಳಿಯದಿದ್ದರೂ ಆ ಚೀಲನ ಇಟ್ಟಕಂಡತ್. ಅಪ್ಪ ಹೇಳಿ ಕೊಟ್ಟಂಗೇ ಅವಂಗೆ ತುಂಬಾ ಸಿಟ್ಟ್ ಬಾಕಾಕನೆಲ್ಲಾ ಒಂದೊಂದು ಆಣಿನ ಮರಕೆ ಹೊಡಿಯತ್ತಿತ್ತ್.

ಬರ್‍ತಾ ಬರ್‍ತಾ, ಅವಂಗೆ ಸಿಟ್ಟ್ ಬಾಕಾಕನ ಓಡಿ ಹೋಗಿ ಆಣಿನ ಹೊಡಿಯದಕ್ಕಿಂತ, ಸಿಟ್ಟ್‌ನ ಕಡಿಮೆ ಮಾಡಿಕಂಡ್ ಸುಮ್ಮನೆ ಕೂರ್ದು ಸುಲಭತೇಳಿ ಅಂವಂಗೆ ಅನ್ನಿಸಿತ್. ದಿನಗ ಕಳೀತಾ ಹೋದಂಗೆ ಅಂವ ಮರಕೆ ಆಣಿ ಹೊಡಿಯದು ಕಡಿಮೆಯಾತ್.

ಕೊನೆಗೆ ಒಂದ್ ದಿನ ಬಾತ್. ಆ ಹೈದಂಗೆ ಸಿಟ್ಟ್ ಬಾದು ನಿತ್ತತ್. ಅಪ್ಪಂಗೆ ಈಗ ಸಮಾಧಾನ ಆತ್. ಮನೆಯವೆ ಮತ್ತೆ ಅವನ ಸ್ನೇಹಿತರಿಗೂ ಖುಷಿ ಆತ್. ಎಲ್ಲವೂ ಅವನೊಟ್ಟಿಗೆ ಲಾಯ್ಕಲಿ ಮಾತಾಡಿಕೆ ಶುರು ಮಾಡ್ದೊ. ಈಗ ಅವನಪ್ಪ ಅವನ್ನ ಕರ್ದ್ ಅಂವ ಪಣ್‌ಪುಳಿ ಮರಕೆ ಹೊಡ್ದ ಒಂದೊಂದೇ ಆಣಿನ ಹೊರಗೆ ಎಳಿಯಕೆ ಹೇಳ್ತ್. ಅಪ್ಪನ ಪ್ರಯೋಗಂದ ಮಜ್ಣಂಗೂ ಖುಷಿಯಾಗಿತ್ತ್. ಅಂವ ಅಪ್ಪ ಹೇಳ್ದಂಗೇ ಒಂದೊಂದೇ ಆಣಿನ ಎಳ್ದ್ ಹೊರಗೆ ತೆಗ್ದ್ ಆದ ಮೇಲೆ ಅಪ್ಪನ ಕರ್‍ಕಂಡ್ ಹೋಗಿ ತೋರ್ಸಿತ್.

ಆಗ ಅಪ್ಪ ಹೇಳ್ತ್. "ಬಾಳಾ ಒಳ್ಳೆ ಕೆಲ್ಸ ಮಾಡಿಯೊಳ್ಳ. ನೀ ಹೊಡ್ದ ಪ್ರತಿಯೊಂದು ಆಣಿನು ಸಹ ಹೊರಗೆ ತೆಗ್ದ್ ಹಾಕೊಳ. ಆದ್ರೆ ನೋಡು. ಆ ಮರಕ್ಕೆ ಎಷ್ಟೊಂದು ಗಾಯ ಆಗಿ ಮರ ಜೀವ ಕಳ್ಕಂಡಂಗೆ ಕಾಣ್ತಾ ಉಟ್ಟು. ಈ ಮರ ಈಗ ಮುಂದೆನಂಗೇ ಆಕೆ ಸಾಧ್ಯನೇ ಇಲ್ಲೆ. ನೀನ್ ಜನಕೆ ಸಿಟ್ಟ್‌ಲಿ ಬೈಯ್ಯಕಾಕನನೂ ಸಹ ಹಿಂಗೇ. ಅವರ ಹೃದಯಕ್ಕೆ, ಮನಸ್ಸಿಗೆ ಗಾಯ ಆದೆ. ನೀನ್ ಮನ್ಸನ ಎದೆಗೆ ಮಾತಿನ ಚೂರಿ ಹಾಕಿ ಕಲಕಿ, ಚೂರಿನ ಹೊರಗೆ ತೆಗ್ದ್ ಎಷ್ಟ್ ಕ್ಷಮೆ ಕೇಳಿರೂ ಅಷ್ಟೇ ಆ ಗಾಯ ಮಾಸಿಕಿಲ್ಲೆ."

ಆಗ ಮಜ್ಣಂಗೆ ಅರ್ಥಾತ್. ಮನಸ್ಸಿಗೆ ಆದ ಗಾಯ ದೇಹಕ್ಕೆ ಆಗುವ ಗಾಯಕ್ಕಿಂತ ಜಾಸ್ತಿ ಬ್ಯಾನೆ ಕೊಟ್ಟದೆತ.

— ಎಡಿಕೇರಿ ಸುಧರ್ಶನ್, ಬೆಂಗಳೂರು.

## Train Starting Year

| | | | |
|---|---|---|---|
| England | 1825 | Australia | 1834 |
| USA | 1829 | India | 1853 |
| France | 1832 | Austria | 1854 |
| Soviat Russia | 1834 | | |

— ಸಂಗ್ರಹ : ಉಗ್ರಾಣಿ ಶ್ಯಾಂ ಸುಂದರ್

ಸದಾ ಭೋಗಿ, ಸದಾ ರೋಗಿ

# ಪತ್ರ ವಿಭಾಗ :



ಮಾನ್ಯರೆ,

ಕೊಡುಗು ಸಂಗಾತಿ ಚೆನ್ನಾಗಿ ಮೂಡಿ ಬರುತ್ತಿದೆ. ಧಾರವಾಹಿ, ಅರೆಭಾಷೆ ವಿಭಾಗ, ಮತ್ತು ಇನ್ನಿತರ ಲೇಖನಗಳು ತುಂಬಾ ಚೆನ್ನಾಗಿದೆ. ಹಾಗೆಯೇ ಎಲ್ಲಾಕ್ಕಿಂತ ಹೆಚ್ಚಾಗಿ ಸಂಗಾತಿ ಭವಿಷ್ಯ ತುಂಬಾ ಆಕರ್ಷಿತವಾಗಿದೆ. ಕೊಡಗು ಸಂಗಾತಿಗೆ ಸಂಗಾತಿ ಭವಿಷ್ಯವು ತುಂಬಾ ಜೀವಕಳೆ ಕೊಡುತ್ತಿದೆ. ಆದರೆ ಭವಿಷ್ಯ ಬರೆಯುವ ಜ್ಯೋತಿಷ್ಯರ ಪರಿಚಯ ನಮಗಿಲ್ಲ. ನಮ್ಮ ಗೌಡ ಜನಾಂಗದಲ್ಲಿ ಇಂತಹ ಒಬ್ಬ ವ್ಯಕ್ತಿ ಇರುವುದು ಅಪೂರ್ವ. ಆದ ಕಾರಣ ಸಂಗಾತಿ ಓದುಗರಿಗೆ, ಅವರನ್ನು ಪರಿಚಯಿಸಿ ಕೊಟ್ಟರೇ ಉಪಕಾರವಾಗುತ್ತಿತ್ತು. ಇನ್ನೂ ಹೊಸದಾಗಿ ಅಧ್ಯಾತ್ಮಿಕ, ಉಭಯ ಕುಶಲೋಪರಿ ಮೂಡಿ ಬಂದರೆ, ಸಂಗಾತಿಗೆ ಇನ್ನೂ ಶೋಭೆ ಹೆಚ್ಚಿ ಅಭಿವೃದ್ಧಿ ಹೊಂದುವುದೆಂದು ನನ್ನ ಅನಿಸಿಕೆ.

— ಕೆ. ಸಿ. ಶಶಿಕಲಾ, ಐಕೋಳ

## ನಾಕಂಡ ಮಹಾನ್ ಗೌಡ ದಿ. ಹೊದ್ದೆಟ್ಟಿ ವೆಂಕಪ್ಪ

ಕೊಡಗು ಸಂಗಾತಿ ಸುರಾಗಿ ಇಲ್ಲಿಗೆ ಮುಟ್ಟ, ಮಹಾನ್ ಗೌಡ ವ್ಯಕ್ತಿಗಳ ಪರಿಚಯ ಮಾಡ್ಯೊಳರಿ. ಆದರೆ ದಿ. ಹೊದ್ದೆಟ್ಟಿ ವೆಂಕಪ್ಪನವರ ಪರಿಚಯ ಲೇಖನ ಬಾತ್ಲೆ. (ಪರಿಚಯ ಲೇಖನ ಪ್ರಕಟ ಆಗಿ ನಾನ್ ಓದದೇ ಹೋಗಿದ್ದರೆ ಮಾಪುಕೇಳಿಕಣೆ)

ಕೊಡಗ್‌ನ ಮಟ್ಟಿಗೆ ಹೇಳಕೊತಾದರೆ ಭಾರೀ ಭಾರಿ ಹೆಸರ್‌ವಾಸಿಯಾದವು ವಳೊ. ಹಣದ ಬಲಲಿ, ವಿದ್ಯಾಬಲಲಿ, ಸಾಂಸಾರಿಕ ಹಿನ್ನೆಲೆ ಬಲಲಿ, ನಾಯಕ ಪಟ್ಟಕ್ಕೆ ಬಂದವು ಬೇಕಾದಷ್ಟ್ ಇರುವೊ. ಆದರೆ ದಿ. ಹೊದ್ದೆಟ್ಟಿ ವೆಂಕಪ್ಪನವರ ಕಥೆಯೇ ಬೇರೆ. ತನ್ನ ಸ್ವಂತ ಶಕ್ತಿ ಸಾಮಾರ್ಥ್ಯಂದ ಅಲ್ಪಾವಧಿಲಿ ಮೇಲೆ ಬಂದ ಅಗ್ರ ಮಾನ್ಯ ನಾಯಕ ಹೆಚ್. ಎಸ್. ವೆಂಕಪ್ಪ 8ನೇ ಕ್ಲಾಸ್‌ಲಿ ಫೇಲಾಗಿ ಸುತ್ತಾಡಿಕಂಡಿದ್ದ ಒಬ್ಬ ಹೈದ ಮಾಡ್ದ ಸಾಧನೆ ಕೊಡಗ್‌ನ ಮಟ್ಟಿಗೆ ಬೇರೆ ಯಾರೂ ಮಾಡ್ದ ಉದಾಹರಣೆ ಕೊಡಿಕೆ ನನ್ನಲ್ಲಿ ಆಧಾರ ಇಲ್ಲೆ. ನಾನ್ ಹಿಂಗೆ ಬರ್‍ದರೆ ಈಗಿನ ನಾಯಕರೆಲ್ಲ ಸಿಟ್ಟಾಗಿ ನನ್ನ ಮಡ್ಗಿಕಿಲ್ಲೇತ ಹೆದ್‌ರ್ಕೆನೂ ಆದೆ. ಆದರೆ ಸತ್ಯಕ್ಕೆ ಮಾತ್ರ ಅಪಚಾರ ಮಾಡಿಕಾಗದ್.

ಅರವತ್ತನೆ ದಶಕದ ಅವಧಿಲಿ ಕೊಡಗ್‌ಲಿ ಇದ್ದ ಜಿಲ್ಲಾಧಿಕಾರಿಗ, ಪೊಲೀಸ್ ಸೂಪರಿಂಟೆಂಡೆಟ್ಸ್‌ಗ, ಫಾರೆಸ್ಟ್ ಅಧಿಕಾರಿಗಳಂತ ದೊಡ್ಡ ದೊಡ್ಡ ಅಧಿಕಾರಿಗ ಈಗ ಬದ್‌ಕಿದ್ದರೆ ಅವು ಮಾತ್ರ ಸತ್ಯ ಸಂಗತಿ ಹೇಳುವೊ. ಮಡಿಕೇರಿ ತಾಲೂಕು ಮಟ್ಟಿಗೆ ಅವರ ಸಹಾಯ ಪಡಿಯದ ವ್ಯಕ್ತಿ ಇರಿಕ್ಕಿಲೆ. ಅವು ಬದ್‌ಕಿದ್ದರೆ ಎಂದೊ ನಮ್ಮರಾಜ್ಯದ ಒಬ್ಬ ಪ್ರಭಾವಿ ಮಂತ್ರಿ ಆಗಿದ್ದಿರುವೊ.

1973ನೇ ಇಸವಿಲಿ ಅವು ಖುದ್ ನನ್ನೊಟ್ಟಿಗೆ ಹೇಳ್ದ ಮಾತ್ "ಮಾಸ್ಟ್ರೆ, ಬೇಗನೆ ನಾನ್ ಮರ್ಡರ್ ಆದಂತೂ ಗ್ಯಾರಂಟಿ. ನಾ ಸತ್ತರೆ ಮಾತ್ರ ಮರ್ಡಿಕೆ ಯಾರು ಇಲ್ಲೆ. ನಾ ಸತ್ತರೆ ಬೇಜಾರ ಮಾಡಿಕೆ ವಳದ್ ಈ ನಾಯಿಯೊಂದೆ" ತ ಹೇಳಿ ಬದಿಲಿ ಕುದ್ದಿದ್ದ ಒಂದು ಕಂತ್ರಿ ನಾಯಿನ ತಲೆ ಪೂಜಿದೊ !.

ಆ ಮಾತ್ ಸತ್ಯ ಆತ್. ಅವರ ಎದ್ರ್ ನಿತ್ತ್ ಜಯಿಸುವ ಸಾಮರ್ಥ್ಯ ಇಲ್ಲದ ಹೇಡಿಗ ಬಾಡಿಗೆ ಹಂತಕರ ಕೈಯಿಂದ ಗುಂಡೊಡ್ಸಿ ಕೊಲ್ಸಿದೊ. ಇದೊಂದು ಗೌಡ ಜನಾಂಗದ ದುರಂತ ಕಥೆ !.

ಕೊಡಗ್‌ನ ಮಟ್ಟಿಗೆ ಗೌಡಜನಾಂಗಲಿ ಇಂತ ಒಂದು ದುರಂತ ನಡ್ದ ದಾಖಲೆ ಇಲ್ಲೆ. ಅವು ಜೀವಂತ ಇದ್ದಿದ್ದರೆ ಇಂದ್ರ ಚಂದ್ರಂಗಲ್ಲ ಹೋಲಿಸಿ ಹೊಗಳಿ ಬರಿಯಕೆ ಬೇಕಷ್ಟ್ ಜನ ಇದ್ದಿರುವೊ! ಆದರೆ ಸತ್ತೋದವನ ಗುಣಗಾನ ಮಾಡಿ, ಬದ್‌ಕಿರುವವರ ವಿರೋಧ ಯಾಕೆ ಕಟ್ಟಿಕಣಕೂತ ಅಂಜಿ ಕಂಡ್ ಅಂತ ನಾಯಕ ನೊಬ್ಬನ ಮರ್ತರೆ ಅದ್ ಇತಿಹಾಸಕ್ಕೆ ಮಾಡುವ ಅಪಚಾರ.

ದಯ ಮಾಡಿ ಒಂದು ಪರಿಚಯ ಲೇಖನ ಪ್ರಕಟಿಸಿರೆ ಯುವಜನಾಂಗಕ್ಕೆ ಸ್ಫೂರ್ತಿಬಾದು.

— ಬಾಚರಣಿಯಂಡ ಅಪ್ಪಣ್ಣ. ಕುಶಾಲನಗರ

ವಿ. ಸೂ: ಸಂಗಾತಿ ಬಹಳ ಹಿಂದೆಯೇ ಲೇಖನ ಮಾಡಿಕ್ಕೆ ಪ್ರಯತ್ನ ಪಟ್ಟತ್. ಅವರ ತೀರಾ ಹತ್ತಿರದವರ ಮಾಹಿತಿ ಇಲ್ಲದರಿಂದ ನಿಧಾನ ಆತ್. ಹೇಳ್ದವು ಮುಂದೆ ಬಾತಿಲ್ಲೆ. ಬರ್‍ತಿಲ್ಲೆ, ಶೀಘ್ರದಲ್ಲೆ ಖಂಡಿತ ಪ್ರಕಟಿಸುವೆ. ನೆನ್ಸಿಕಂಡದಕ್ಕೆ ವಂದನೆಗ - ಅಪ್ಪಣ್ಣನವುಕ್ಕೆ.

## ಅರಳುವ ಪ್ರತಿಭೆಗ

ಅರಳುವ ಪ್ರತಿಭೆಗಳಿಗೆ ಹೊರ ಹೊಮ್ಮುವ ಅವಕಾಶ ಕೊಡಗು ಸಂಗಾತಿಯದು, ಮನಸ್ಸಿನ ಅಳಲನ್ನು ಬರೆದು ತಿಳಿಸುವ ಅವಕಾಶ ಲೇಖಕರದು, ಗೌಡಜನರ ಸಂಸ್ಕೃತಿಯನ್ನು ಓದಿ ತಿಳಿದು ಕೊಳ್ಳುವ ಸದವಕಾಶ ಗೌಡ ಜನಾಂಗದವರದು. ಮನೆ ಮನೆಯಲ್ಲಿ ಮಾತಾಗಿರುವ ಈ ಸಂಗತಿಗಳನ್ನು ತಿಳಿಯಲು ತಪ್ಪದೆ "ಕೊಡಗು ಸಂಗಾತಿ"ಯನ್ನು ಕೊಂಡು ಓದಿ ಮರೆಯದಿರಿ ಅಂತ ನಾನು ಹೇಳುವುದಿಲ್ಲ. ಎಲ್ಲಾ ಗೌಡ ಜನರ ಬಾಯಲ್ಲಿ ಹೊರ ಹೊಮ್ಮಿ ಬರುವಂತಹ ಅವಕಾಶಕ್ಕೆ "ಕೊಡಗು ಸಂಗಾತಿ" ಎಷ್ಟು ಶ್ರಮ ಪಟ್ಟಿದೆ ಅಂದರೆ ಅದನ್ನು ಹೇಳಲು ಹಾಗೂ ಬರೆಯಲು ನನಗಂತೂ ಸಾಧ್ಯವಿಲ್ಲ. ಆದರೆ ಸಂಪಾದಕರು ತನ್ನ ಛಲವನ್ನು ಎಡಬೆಡದೆ ತನ್ನ ಗುರಿಯನ್ನು ಸಾಧಿಸಿದೆ ಅಂದರೆ ಅದು ತಪ್ಪಾಗ ಲಾರದು. ಅದರಲ್ಲಿ ಕೆಲವು ಪ್ರಶ್ನಾವಳಿ? ವಿಭಾಗ ಎಂದು ಒಂದಿದ್ದರೆ? ಚೆನ್ನಾಗಿತ್ತು. ಕೆಲವು ಅರಳುವ ಪ್ರತಿಭೆಗಳಿಗೆ ಒಂದೊಂದು ಅವಕಾಶ ಸಿಕ್ಕುತ್ತಿತ್ತು. ನಮಗೆ ಒಂದು ಅವಕಾಶ ಸಿಕ್ಕರೆ? ಎಂದು ಕೆಲವರ ಅಭಿಪ್ರಾಯ ಅದಕ್ಕೆ ಜನರ ಪ್ರೋತ್ಸಾಹ ಶ್ರಮ ಬೇಕು. ಜನರಲ್ಲಿ "ಕೊಡಗು ಸಂಗಾತಿ" ಸ್ಪಂದಿಸುವಂತಾಗ ಬೇಕು. ಇಂತಹ ಅವಕಾಶಕ್ಕೆ ಗೌಡ ಜನರ ಗಮನವಿರಲಿ ಮತ್ತು "ಕೊಡಗು ಸಂಗಾತಿ" ಗೌಡ ಜನಾಂಗಧವರಿಗೆ ಸೀಮಿತವಾಗಿರದೆ ಎಲ್ಲಾ ಭಾಷೆಯ ಜನರು ಕೊಂಡು ಓದುವಂತಾಗಲಿ ಎಂದು ಶುಭ ಹಾರೈಸುವ.

ಅಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

16ನೇ ಪುಟದಿಂದ

ಸಣ್ಣ ಪುಟ್ಟ ದುರಸ್ತಿ ಕಾರ್ಯಗಳನ್ನು ಸರಿಪಡಿಸಲಾಗಿದ್ದು ಕಟ್ಟಡದ ಹಾಲಿಗೆ ಫ್ಯಾನುಗಳನ್ನು ಅಳವಡಿಸುವುದರೊಂದಿಗೆ 50 ಫೈಬರ್ ಕುರ್ಚಿಗಳನ್ನು ಖರೀದಿಸಿರುತ್ತೇವೆ.

21.1999ನೇ ವರ್ಷದಲ್ಲಿ ನಮ್ಮ ದೇಶದ ರಕ್ಷಣೆಯ ಕಾರ್ಯದಲ್ಲಿ ಕಾರ್ಗಿಲ್ ಕಣಿವೆ ಪ್ರದೇಶದಲ್ಲಿ ತಮ್ಮ ಪ್ರಾಣಾರ್ಪಣೆ ಗೈದು ದೇಶ ರಕ್ಷಣೆ ಮಾಡಿದ ನಮ್ಮ ಸೇನಾ ಸಿಪಾಯಿಗಳ ಸಂಸಾರದ ಕಷ್ಟ ಪರಿಹಾರ ನಿಧಿಗೆ ನಮ್ಮ ಸಂಘದಿಂದ ರೂ. 10,000-00 ಹಾಗೂ ಆಡಳಿತ ಮಂಡಳಿ ಸದಸ್ಯರುಗಳ ವೈಯಕ್ತಿಕ ಕೊಡುಗೆ ರೂ. 3,000-00 ಸೇರಿ ಒಟ್ಟು ರೂ. 13,000-00 ಮೊತ್ತವನ್ನು ಜಿಲ್ಲಾಧಿಕಾರಿಗಳ ನಿಧಿಗೆ ನೀಡಿ ಕರ್ತವ್ಯವನ್ನು ನಿರ್ವಹಿಸಿದ್ದೇವೆ.

22.1999ನೇ ಸಾಲಿನಲ್ಲಿ ಜನಾಂಗದ 21 ಮಂದಿ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಒಟ್ಟು ರೂ. 15,200-00 ಮೊತ್ತದ ಪುರಸ್ಕಾರ ನೀಡಿ ಗೌರವಿಸಿದ್ದೇವೆ.

23. 1999ನೇ ಸಾಲಿನಲ್ಲಿ ಗೌಡ ಸಮಾಜದ ಅಂಗಳದಲ್ಲಿ ಶಿಥಿಲಾವಸ್ಥೆಯಲ್ಲಿದ್ದ ಸಂಘದ ಕಟ್ಟಡ ಬಿದ್ದು ನಷ್ಟ ಕಷ್ಟಗಳು ಬರುವುದನ್ನು ತಪ್ಪಿಸಲು ಈ ಕಟ್ಟಡವನ್ನು ಈ ಹಿಂದಿನ ಮಹಾಸಭೆ ನೀಡಿದ ಅನುಮತಿಯಂತೆ ನೆಲಸಮ ಮಾಡಿ ಅದರ ಮರಮುಟ್ಟು ಹಾಗೂ ಹಂಚಿನಿಂದ ದೊರೆತ ರೂ. 34,700-00 ಮೊತ್ತವನ್ನು ಸಂಘದ ಲೆಕ್ಕಕ್ಕೆ ಜಮಾಗೊಳಿಸಿದ್ದೇವೆ. ಈ ಕಟ್ಟಡಕ್ಕೆ ಬಹಳ ವರ್ಷಗಳ ಹಿಂದೆ ಮರಮುಟ್ಟುಗಳನ್ನು ದಾನ ಮಾಡಿದ ಕೊಡೆಕಲ್ಲು ಕುಟುಂಬದವರಿಗೆ ಸಂಘವೂ ಕೃತಜ್ಞತೆಯನ್ನು ಅರ್ಪಿಸಿ ಅವರನ್ನು ನೆನೆಸಿಕೊಳ್ಳುತ್ತದೆ. ಈ ಕಟ್ಟಡವನ್ನು ತೆಗೆದ ಜಾಗವನ್ನು ಗೌಡ ಸಮಾಜದ ಆಡಳಿತ ಮಂಡಳಿಯವರಿಗೆ ತಾತ್ಕಾಲಿಕವಾಗಿ ಒಪ್ಪಿಸಿ, ಗೌಡ ಸಮಾಜದಲ್ಲಿ ನಡೆಯುವ ಪ್ರತಿಯೊಂದು ಮದುವೆ ಕಾರ್ಯದಿಂದ ಬರುವ ಬಾಡಿಗೆಯ ಶೇಕಡ 10ರ ಹಣವನ್ನು ಜಾಗಕ್ಕೆ ಬಾಡಿಗೆ ರೂಪದಲ್ಲಿ ವಿದ್ಯಾ ಸಂಘಕ್ಕೆ ನೀಡುವಂತೆ ಒಪ್ಪಿಸಿಕೊಟ್ಟಿದ್ದೇವೆ.

ಮಾನ್ಯರೇ ಹಿಂದಿನ 5 ವರ್ಷಗಳಲ್ಲಿ ನಾವು ಕೈಗೊಂಡ ಕಾರ್ಯಗಳನ್ನು ಕೂಲಂಕುಷವಾಗಿ ತಮ್ಮಗಳ ಮುಂದೆ ತರುವ ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಮಾಡಿದ್ದೇವೆ. ಈ 5 ವರ್ಷಗಳಲ್ಲಿ ನಾವು ಒಟ್ಟು 56 ಆಡಳಿತ ಮಂಡಳಿ ಸಭೆಗಳನ್ನು ಹಾಗೂ ಮೈಸೂರು ಕಟ್ಟಡದಲ್ಲಿ 12 ಆಡಳಿತ ಮಂಡಳಿ ಸಭೆಗಳನ್ನು ನಡೆಸಿ ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚಿಸಿ ಕ್ರಮ ಕೈಗೊಂಡಿದ್ದೇವೆ.

ಜನಾಂಗ ಬಾಂಧವರ ಬೇಡಿಕೆಗಳಿಗನುಸರಿಸಿದಂತೆ ಹಲವು ಕಾರ್ಯಗಳು ಈ ಕಟ್ಟಡದಲ್ಲಿ ಆಗಲು ಬಾಕಿ ಇರುವುದಾಗಿದೆ. ಇವುಗಳಲ್ಲಿ ಉತ್ತಮ ಸಾರ್ವಜನಿಕ ಶೌಚಾಲಯ ಶುಚಿತ್ವ ಹಾಗೂ ಸುಸಜ್ಜಿತ ಅಡುಗೆ ಕೋಣೆಗಳ ನಿರ್ಮಾಣದ ತುರ್ತು ಅಗತ್ಯ ಇರುವುದಾಗಿದೆ. ಹಾಗೆಯೇ ಜನಾಂಗದ ಹಿತದೃಷ್ಟಿಯಿಂದ ಒಂದು ಪುಸ್ತಕ ಭಂಡಾರ ಮತ್ತು ವಸ್ತು ಸಂಗ್ರಹದ ಅವಶ್ಯಕತೆ ಇರುವುದು. ಮುಂಬರುವ ಆಡಳಿತ ಮಂಡಳಿ ಈ ಕಾರ್ಯಕ್ಕೆ ಆದ್ಯತೆ ನೀಡಿ ಕಾರ್ಯ ಪಹಿಸಲೆಂದು ಆಶಿಸುತ್ತೇವೆ.

**ಆಡಳಿತ ಮಂಡಳಿ ಪರವಾಗಿ ಸೂರ್ತಲೆ ಸೋಮಣ್ಣನವರಿಂದ ಪ್ರಕಟ.**

14ನೇ ಪುಟದಿಂದ

ವಿವರವಾದ ಚರ್ಚೆಗೆ ಒಳಗಾದವು. ಅಮೆ ಶಿವರಾಯ್, ಚೆರಿಯ ಚಂದ್ರಶೇಖರ್, ಕೆ. ಎ. ಪಾಲಾಕ್ಷ ಮೊದಲಾದವರ ಪ್ರಶ್ನೆಗಳ ಸುರಿಮಳೆಗೆ ವೇದಿಕೆಯ ಮೇಲಿನಿಂದ ಸೂರ್ತಲೆ ಸೋಮಣ್ಣನವರು ಸಮರ್ಥವಾದ ನೇರ ಉತ್ತರ ನೀಡುತ್ತಿದ್ದರು. ಸಭೆಯಲ್ಲಿ ಹಲವಾರು ಗಣ್ಯರು, ಹಿರಿಯರು ಪಾಲ್ಗೊಂಡಿದ್ದು, ಸಂಘವು ಮುಂದೆ ಮಾಡಬೇಕಾದ ಕಾರ್ಯಗಳ ಬಗ್ಗೆ ಸಲಹೆ ಸೂಚನೆ ನೀಡುತ್ತಿದ್ದರು.

ದಿನಾಂಕ 12-11-2000ದಲ್ಲಿ ನಡೆದ ಮಹಾಸಭೆ ಚುನಾವಣೆಯಲ್ಲಿ ಕೊಡಗು ಗೌಡ ವಿದ್ಯಾ ಸಂಘಕ್ಕೆ ಆಯ್ಕೆಯಾದ ಪದಾಧಿಕಾರಿಗಳು : ಅಧ್ಯಕ್ಷರಾಗಿ ಹೊಸೂರು ರಮೇಶ್, ಉಪಾಧ್ಯಕ್ಷರಾಗಿ ಸೂರ್ತಲೆ ಸೋಮಣ್ಣ, ಕಾರ್ಯದರ್ಶಿಯಾಗಿ ಕುಡೆಕಲ್ಲು ವಿದ್ಯಾಧರ, ಸಹ ಕಾರ್ಯದರ್ಶಿಯಾಗಿ ಅಂಬೆಕಲ್ ಶ್ಯಾಂ, ಖಜಾಂಚಿಯಾಗಿ ಪೊನ್ನಚನ ಜಿ. ಸೋಮಯ್ಯನವರು ಅಲ್ಲದೆ ನಿರ್ದೇಶಕರಾಗಿ ಕೋಡಿ ಚಂದ್ರಶೇಖರ್, ಡಾ.ಕುಯ್ಯಮುಡಿ ಅಪ್ಪಾಜಿ, ಅಮೆ ಕಮಲಾ ಗಣಪತಿ, ಯಾಲ್‌ದಾಳ್ ಸಾವಿತ್ರಿ, ಸೂದನ ಈರಪ್ಪ, ಪರ್ಲಕೋಟಿ ಕಾವೇರಿಯಪ್ಪ, ಕುಕ್ಕುನೂರು ನಾಣಯ್ಯ, ಪಾಣತ್ತಲೆ ಬಾಲಕೃಷ್ಣ, ಮೊಟ್ರ ಬಾಲಕೃಷ್ಣ ಮತ್ತು ಬೆಪ್ಪುರನ ಮೇದಪ್ಪ ಇವರುಗಳು ಆಯ್ಕೆ ಆಗಿದ್ದಾರೆ.

**ವರದಿ : ಪಟ್ಟಡ ಶಿವಕುಮಾರ್**

## ಕಾವೇರಿ

ಕೊಡಗಿನ ಕಾವೇರಿ ತಾಯೆ
ಎನಿತು ನಿನ್ನಯ ಮಾಯೆ
ಹಾಡಿ ಹೊಗಳುವೆನು ಮಾತೆ
ನಿನ್ನಯ ಪಾವನ ಗೀತೆ

ಕಾಫಿಯ ಸುಮದಲ್ಲಿ ಘಮಘಮಿಸುತ್ತಿಹಳು
ಮಧುವಿನ ವನದಲ್ಲಿ ಸುಳಿದಾಡುತ್ತಿಹಳು
ಕಿತ್ತಳೆಯ ಸವಿಯಲ್ಲಿ ಕುಣಿದಾಡುತ್ತಿಹಳು
ಮಡಿಕೇರಿ ಮಂಜಿನಲ್ಲಿ ಪಿಸುಗುಟ್ಟುತ್ತಿಹಳು

ಹಸಿರುಡುಗೆಯುಟ್ಟ ಪ್ರಕೃತಿಯ ಮಡಿಲಲ್ಲಿ
ಹಕ್ಕಿಗಳ ತಾಳಕ್ಕೆ ನಾಟ್ಯವಾಡುತ್ತಿಹಳು
ವೀರ ಯೋಧರಿಗೆ ಜನ್ಮವಿತ್ತಿಹಳು
ಕೊಡಗಿನ ಬೆಡಗಿಗೆ ಸೃಷ್ಟಿಕರ್ತೆ ಇವಳು

ಹೇಳದಿರಿ ಈ ಸೃಷ್ಟಿಗೆ ನೀವು 'ಕರುನಾಡ ಕಾಶ್ಮೀರ"
ಸಾಟಿಯಾಗಲಾರದು ಇದಕೆ ಆ ಒಂದು ಕಾಶ್ಮೀರ
ಅನಾದಿಯಿಂದಲೂ ಕೊಡಗು ಅನುಪಮ ಸುಂದರ
ಕಾವೇರಿಯಿಂದಲೇ ಕನ್ನಡಿಗರ ಪಾಪ ಪರಿಹಾರ

ಹೊರಟಿಹಳು ಲೋಪಾಮುದ್ರೆ ಬ್ರಹ್ಮಗಿರಿಯಿಂದ
ಸ್ವಾರ್ಥವಿಲ್ಲದೆ ಮಾಡಲು ಲೋಕ ಕಲ್ಯಾಣ.

**ಕುದುಕುಳಿ ಕಾಂಚನ ಭರತ್, ಭಾಗಮಂಡಲ**

**ನಿತ್ಯ ಬಡವನಿಗೆ ಚಿಂತೆ ಇಲ್ಲ**

# ಹತ್ತು ಕುಟುಂಬ ಹದಿನೆಂಟು ಗೋತ್ರದ ಜನಾಂಗವನ್ನು ತಬ್ಬಿಬ್ಬು (Confuse) ಗೊಳಿಸುವ ಚಿಹ್ನೆಗಳು




ಗೌಡರ ಪ್ರಥಮ ಚಿಹ್ನೆ-1968




ಗೌಡ ಸಮ್ಮೇಳನ - 1985
ಸುಳ್ಯ



ಗೌಡ ಸಮ್ಮೇಳನ - 1996
ಸುಳ್ಯ




ಕೊಡಗು ಗೌಡ ಸಮಾಜ
ಬೆಂಗಳೂರು - 1969

ಗೌಡ ಸಮಾಜ
ಮಡಿಕೇರಿ

ಬಾಂಧವರೇ,

ನಾಯಿ ಕೊಡೆಗಳಂತೆ ಹುಟ್ಟಿಕೊಂಡ ಹಾಗೆ ದಿನೇ ದಿನೇ ಹುಟ್ಟುತ್ತಿರುವ ನಮ್ಮ ಜನಾಂಗದ ಚಿಹ್ನೆಗಳನ್ನು ಕಂಡು ನಮಗೆ ತಬ್ಬಿಬ್ಬು ಆಗುತ್ತಿದೆ. ಪತ್ರಿಕೆಯ ಪ್ರಚೋದನೆಯಿಂದ ಹಿರಿಯರು, ಕಿರಿಯರು ಪ್ರಗತಿಯತ್ತ ದಾಪುಗಾಲು ಹಾಕುತ್ತಿರುವ ಈ ಸಂದರ್ಭದಲ್ಲಿ ತಿಳಿದೋ, ತಿಳಿಯದೆಯೋ ನಮ್ಮ ಜನಾಂಗದವರಿಂದ ಅಚಾತುರ್ಯ ವಾಗುತ್ತಿದೆ. ಹಲವಾರು ಸಂಘ ಸಂಸ್ಥೆಗಳು ನಮ್ಮ ಸಮಾಜದ ಏಳಿಗೆಗಾಗಿ ಶ್ರಮಿಸುತ್ತಿರುವಾಗ ಇಟ್ಟುಕೊಂಡ ತಮ್ಮದೇ ಆದ ಚಿಹ್ನೆಗಳು.

ನಾವೆಲ್ಲರೂ ಒಗ್ಗಟ್ಟಿನಿಂದ ನಮ್ಮ ಜನಾಂಗವನ್ನು ಪ್ರಗತಿಯತ್ತ ಮುನ್ನುಗ್ಗುವಾಗ ಚಿಹ್ನೆಗಳಿಂದಾಗಿ ಮುಂದಿನ ಪೀಳಿಗೆಗೆ ನಮ್ಮಲ್ಲಿ ಹಲವಾರು ಜಾತಿಗಳು ಇರಬಹುದೇ ಎಂಬ ಪ್ರಶ್ನೆ ಉದ್ಭವಿಸಬಹುದಲ್ಲವೇ?

ಆದ್ದರಿಂದ ಹಿರಿಯರು, ಕಿರಿಯರೆಲ್ಲ ಸೇರಿ "ನಮ್ಮದು ಇದು ನಮ್ಮದು, ಅರೆಗನ್ನಡ ಭಾಷೆ ನಮ್ಮದು" ಎಂಬಂತೆ "ನಮ್ಮದು ಇದು ನಮ್ಮದು ಇದರಲ್ಲಿ ಯಾವ ಚಿಹ್ನೆ ನಮ್ಮದು" ಎಂದು ತಿಳಿಸುವಿರಾ?

ಉದ್ಧಟತನವೆನಿಸಿದರೆ ದಯವಿಟ್ಟು ಕ್ಷಮಿಸಿ.

- ತೇನನ ರಾಜೇಶ್, ಬೆಂಗಳೂರು
ಚಿಹ್ನೆ ಸಂಗ್ರಹ : ಪಟ್ಟಡ ಪ್ರಭಾಕರ್



ಕೊಡಗು ಸಂಗಾತಿ 9-4-1997



ಕೊಡಗು ಗೌಡ ವಿದ್ಯಾಸಂಘ,
ಮಡಿಕೇರಿ



ಕೊಡಗು ಗೌಡ ಸಾಂಸ್ಕೃತಿಕ
ಅಕಾಡೆಮಿ ಮಡಿಕೇರಿ
7-11-1997



ಗೌಡ ಮಹಿಳಾ ಒಕ್ಕೂಟ,
ಮಡಿಕೇರಿ 3-11-1997



ಕೊಡಗು ಗೌಡ ಮಾಜಿ ಸೈನಿಕರ
ಕ್ಷೇಮಾಭಿವೃದ್ಧಿ ಸಂಘ-2000











ಬೆಂಗಳೂರಿನ ಕಾವೇರಿ ನಾಡಿನ ಅಮ್ಮಾಜೀರ ಪೊನ್ನಪ್ಪನವರ ತಮ್ಮ ಸಂಸ್ಥೆಯ ವಿವಿಧ ಚಿಹ್ನೆಗಳು

Reg. No. KA/SK/MYS-88 Registered : 10-01-96 TCI Kar. 09592

# ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ (ರಿ.)

C/o ಕೊಡಗು ಗೌಡ ವಿದ್ಯಾರ್ಥಿ ನಿಲಯ, ನಂ. 70, ನಾಲ್ಕನೇ ಬ್ಲಾಕ್, ಜಯಲಕ್ಷ್ಮಿ ಪುರಂ, ಮೈಸೂರು-12

## ಆದರ್ಶ ದಂಪತಿ ಮತ್ತು ಫ್ಯಾಷನ್ ಶೋ ಹಾಗೂ ಅದ್ದೂರಿ ಸಾಂಸ್ಕೃತಿಕ ಕಾರ್ಯಕ್ರಮದ ಆಮಂತ್ರಣ ಪತ್ರಿಕೆ

## ಸರ್ವರಿಗೂ ಸ್ವಾಗತ

**ಕೊಡಗು ಗೌಡ ಮಾಜಿ ಸೈನಿಕರ ವತಿಯಿಂದ ಜನಾಂಗದ ಪ್ರಪ್ರಥಮ ಸಾಂಸ್ಕೃತಿಕ ಕಾರ್ಯಕ್ರಮ**

ದಿನಾಂಕ : **03-12-2000** ಭಾನುವಾರ

ಸಮಯ : ಬೆಳಿಗ್ಗೆ **10** ರಿಂದ ಸಂಜೆ **5** ಗಂಟೆಯವರೆಗೆ

ಸ್ಥಳ : ಕಲಾಮಂದಿರ, ಮೈಸೂರು

*ಕಾರ್ಯಕ್ರಮದ ಉದ್ಘಾಟನೆ :*

**ಬೆಳಿಗ್ಗೆ 10 ಗಂಟೆಗೆ ಮುಖ್ಯ ಅತಿಥಿಗಳಿಂದ**

*ಮುಖ್ಯ ಅತಿಥಿಗಳು :*

**ಶ್ರೀ ತೋಟಂಬೈಲು ಎಂ. ನಾಣಯ್ಯನವರು,**
ಅಧ್ಯಕ್ಷರು, ಕೊಡಗು ಗೌಡ ಸಮಾಜ, ಮಡಿಕೇರಿ

**ಶ್ರೀ ದಂಬೆಕೋಡಿ ಎಸ್. ಆನಂದರವರು**
ಅಧ್ಯಕ್ಷರು, ಕೊಡಗು ಮತ್ತು ದ. ಕ. ಗೌಡ ಸಮಾಜ, ಬೆಂಗಳೂರು

**ಶ್ರೀ ತುಮ್‌ತಜ್ಜೆ ಗಣೇಶ್‌ರವರು**
ಅಧ್ಯಕ್ಷರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ

**ಶ್ರೀ ಅಮ್ಮೆವ್ವನ ಪಿ. ವಾಸುರವರು**
ಅಧ್ಯಕ್ಷರು, ಕೊಡಗು ಗೌಡ ಸಮಾಜ, ಬೆಂಗಳೂರು

**ಶ್ರೀ ಕುಯ್ಯಮುಡಿ ಕೆ. ಪೂರ್ಣಯ್ಯನವರು**
ಅಧ್ಯಕ್ಷರು, ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿ

**ಶ್ರೀಮತಿ ಚೀಯಂಡಿ ರಾಧ ಯಾದವ್‌ರವರು**
ಅಧ್ಯಕ್ಷರು, ಕೊಡಗು ಗೌಡ ಮಹಿಳಾ ಒಕ್ಕೂಟ, ಮಡಿಕೇರಿ

## ಕಾರ್ಯಕ್ರಮಗಳು

ಅ. ಅತಿಥಿಗಳಿಂದ ಜ್ಯೋತಿ ಬೆಳಗುವುದು

**ಆ. ಸಾಂಸ್ಕೃತಿಕ ಕಾರ್ಯಕ್ರಮ ಪ್ರಾರಂಭ 10 ಗಂಟೆಗೆ**

೧. ಜನಾಂಗದ ಸಂಸ್ಕೃತಿಯ ಉಡುಗೆ ತೊಡುಗೆಗಳ ಪ್ರದರ್ಶನ
೨. ಸಾಂಸ್ಕೃತಿಕ ನೃತ್ಯ
೩. ಲಘು ಉಪಹಾರ
೪. ಪ್ರಾರ್ಥನೆ
೫. ಅತಿಥಿಗಳ ಸ್ವಾಗತ
೬. ಸಂಘದ ಅಧ್ಯಕ್ಷರಿಂದ ಪ್ರಾಸ್ತವಿಕ ಭಾಷಣ
೭. ಅತಿಥಿಗಳಿಂದ ಭಾಷಣ
೮. ಲಾಟರಿಯ ಅದೃಷ್ಟಶಾಲಿಗಳ ಆಯ್ಕೆ
೯. ಬಹುಮಾನ ವಿತರಣೆ
೧೦. ವಂದನಾರ್ಪಣೆ
೧೧. ರಾಷ್ಟ್ರಗೀತೆ

**ಭಾಗವಹಿಸುವ ಸ್ಪರ್ಧಿಗಳಿಗೆ ಅಖೈರಿ ತಾರೀಖ್ 25-11-2000**

ಸ್ಥಳ : ಮೈಸೂರು

ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.